# ವ್ಯಾಸಭಾರತದ

# ಭೀಮಸೇನ




ಡಾ|| ವ್ಯಾಸನಕೆರೆ ಪ್ರಭಂಜನಾಚಾರ್ಯ

ಎಂ.ಎ., ಪಿಎಚ್.ಡಿ., ಎಫ್.ಐ.ಬಿ.ಆರ್.ಎಫ್.



ಪ್ರಕಾಶನ

ಪರ್ಯಾಯ ಶ್ರೀಕಾಣಿಯೂರು ಮಠ

ಉಡುಪಿ - 576 101

# ವ್ಯಾಸಭಾರತದ
# ಭೀಮಸೇನ

ಡಾ|| ವ್ಯಾಸನಕೆರೆ ಪ್ರಭಂಜನಾಚಾರ್ಯ

ಎಂ.ಎ., ಪಿಎಚ್.ಡಿ., ಎಫ್.ಐ.ಬಿ.ಆರ್.ಎಫ್.

ಪರ್ಯಾಯ ಶ್ರೀಕಾಣಿಯೂರು ಮಠ

ಉಡುಪಿ - 576 101

**VYĀSABHĀRATADA BHĪMASENA**- A collection of lectures delivered by *Vidyāvācaspati, Darśanaratnam, Paṇḍitaratnam, Mahābhārataratnam, Pravacanācārya, Śrīvyāsamadhwasevādhurīṇa Sacchāstravicakṣaṇaratnam, Sacchāstrapravacanapravīṇa, Śāstrapravacanakesari, Vedavidyāvicakṣaṇa, Jnānaratnākara,* **Dr.Vyasanakere Prabhanjanacharya**, M.A., Ph.D., F.I.B.R.F.(Ind), Professor and Head of the Department of Sanskrit, Govt. Arts College, Bangalore and compiled by Vidwan Sagri Raghavendra Upadhyaya, Asst. Professor, SMSP Sanskrit College, Udupi and Published by **Paryāya Śrī Kaṇiyūru Maṭha,** Udupi- 576 101.



Typeset By :

**Rayiprāṇa Impressions,**
Bangalore - 85, Ph: 679 0660

Printed at :

**Rashtrotthana Mudranalaya,**
Bangalore

# ಅನುಗ್ರಹ ವಚನ

**ಶ್ರೀ ಶ್ರೀ ವಿದ್ಯಾವಲ್ಲಭತೀರ್ಥ ಸ್ವಾಮಿಜಿ**
**ಜಗದ್ಗುರು ಶ್ರೀಮನ್ಮಧ್ವಾಚಾರ್ಯ ಸಂಸ್ಥಾನಂ**
**ಶ್ರೀ ಕಾಣಿಯೂರು ಮಠ, ಉಡುಪಿ.(ದ. ಕ.) 576101**

ಮನುಜರಲ್ಲಿ ಹೇಗೆ ಬ್ರಾಹ್ಮಣರೋ, ಆಯುಧಗಳಲ್ಲಿ ಹೇಗೆ ವಜ್ರಾಯುಧವೋ ಹಾಗೆ ಸಮಗ್ರಶಾಸ್ತ್ರಗಳಲ್ಲಿ ಮಹಾಭಾರತ ಉತ್ತಮವಾದುದು. ಇದು ಮಾರ್ಕಂಡೇಯ ಪುರಾಣದ ಮಾತು. **'ಯದಿಹಾಸ್ತಿ ತದನ್ಯತ್ರ ಯನ್ನೇಹಾಸ್ತಿ ನ ಕುತ್ರಚಿತ್'**– ಮಹಾಭಾರತದಲ್ಲಿ ಇರುವಂತಹುದ್ದೇ ಬೇರೆಕಡೆ ದೊರಕಲು ಸಾಧ್ಯ. ಮಹಾಭಾರತದಲ್ಲಿ ಇಲ್ಲದಿದ್ದುದು ಮತ್ತೆಲ್ಲಿಯೂ ದೊರಕಲಾರದು. ಹೀಗೆ ಶ್ರೀವೇದವ್ಯಾಸರು ಎಲ್ಲ ಶಾಸ್ತ್ರಗ್ರಂಥಗಳ ಸಾರವನ್ನು ಮಹಾಭಾರತದಲ್ಲಿ ಸೇರಿಸಿದ್ದಾರೆ.

ಇಂತಹ ಮಹಾಭಾರತದಲ್ಲಿ ಭೀಮಸೇನನ ಪಾತ್ರ ತುಂಬ ಮಹತ್ತ್ವಪೂರ್ಣವಾದದ್ದು. ಸಾಮಾನ್ಯವಾಗಿ ಭಾವಿಸುವಂತೆ ಭೀಮಸೇನ ಬರೀ ತಿಮ್ಮಂಡಿ ಅಲ್ಲ; ಹಠಮಾರಿಯೂ ಅಲ್ಲ; ಅವಿವೇಕಿಯೂ ಅಲ್ಲ. ಇದಕ್ಕೆ ಬದಲಾಗಿ ಜ್ಞಾನ, ಭಕ್ತಿ ವಿರಕ್ತಿ, ಧೈರ್ಯಗಳ ಸಾಕಾರಮೂರ್ತಿ ಅವನು. ಬಲದೇವತೆ. ಯುಧಿಷ್ಠಿರಾದಿಗಳಿಗೆ ಬಂದ ಆಪತ್ತನ್ನೆಲ್ಲ ಪರಿಹರಿಸಿದವನು ಭೀಮಸೇನನೇ.

ಬಕಾಸುರನ ಸಂಹಾರದ ಹಿನ್ನೆಲೆಯಲ್ಲಿ ಯುಧಿಷ್ಠಿರ ಕುಂತಿಯಲ್ಲಿ ತಾವೆಲ್ಲ ಭೀಮಸೇನನ ಬಲವನ್ನು ಅವಲಂಬಿಸಿಕೊಂಡು ಬದುಕುತ್ತಿರುವರು – ಎಂದು ಹೇಳುವನು. ಇದರಿಂದ ಸ್ಪಷ್ಟವಾಗುವುದು – ಪಾಂಡವರಿಗೆ ಭೀಮನ ಅವಶ್ಯಕತೆ ಎಷ್ಟು ಇತ್ತೆಂಬುದು.

ಪ್ರಕೃತ **'ಶ್ರೀವ್ಯಾಸಮಧ್ವಸೇವಾಧುರೀಣ'** ಡಾ||ವ್ಯಾಸನಕೆರೆ ಪ್ರಭಂಜನಾಚಾರ್ಯರು ನಮ್ಮ ಪರ್ಯಾಯಕಾಲದಲ್ಲಿ **'ಮಹಾಭಾರತದಲ್ಲಿ ಭೀಮಸೇನ'** ಎಂಬ ವಿಷಯದ ಕುರಿತು ಉಪನ್ಯಾಸವನ್ನು ನೀಡಿದ್ದರು. ಅದನ್ನು ಪುಸ್ತಕರೂಪದಲ್ಲಿ ಹೊರತರಬೇಕೆಂದು ನಮ್ಮ ಬಲವಾದ ಇಚ್ಛೆ ಇತ್ತು. ಅದು ನೆರವೇರಿದೆ ಎಂಬುದು ಸಂತೋಷದ ಸಂಗತಿ.

ಪ್ರವಚನವನ್ನು ನಡೆಸಿಕೊಟ್ಟ ಡಾ||ಪ್ರಭಂಜನಾಚಾರ್ಯರಿಗೂ, ಪ್ರವಚನವನ್ನು ಪುಸ್ತಕರೂಪದಲ್ಲಿ ಸಂಗ್ರಹಿಸಿದ ಸಗ್ರಿ ರಾಘವೇಂದ್ರ ಉಪಾಧ್ಯಾಯರಿಗೂ ಶ್ರೀಕೃಷ್ಣ ಮುಖ್ಯಪ್ರಾಣರ ಅನುಗ್ರಹ ರಕ್ಷೆ ಇರಲಿ.

ಈ ಪುಸ್ತಕದ ಸದುಪಯೋಗ ಎಲ್ಲ ಭಕ್ತರೂ ಪಡೆಯುವಂತಾಗಲೆಂದು ನಾವು ಆಶಿಸುತ್ತೇವೆ.

ಉಡುಪಿ – 576101
ದಿನಾಂಕ : 18 – 12 – 1999

ಇತಿ ನಾರಾಯಣಸ್ಮರಣೆಗಳು,

# ಸಂಗ್ರಾಹಕನ ಅನಿಸಿಕೆ

**'ಶ್ರೀವ್ಯಾಸಮಧ್ವಸೇವಾಧುರೀಣ'** ಡಾ||ಪ್ರಭಂಜನಾಚಾರ್ಯರು ಉಡುಪಿ ಶ್ರೀಕೃಷ್ಣನ ಪೂಜಾಪರ್ಯಾಯಪೀಠಸ್ಥರಾದ ಕಾಣಿಯೂರು ಮಠದ ಶ್ರೀಶ್ರೀವಿದ್ಯಾವಲ್ಲಭತೀರ್ಥರ ಅಪೇಕ್ಷೆಯಂತೆ ಉಡುಪಿ ಶ್ರೀಕೃಷ್ಣ ,ಮುಖ್ಯಪ್ರಾಣದೇವರ ಸನ್ನಿಧಾನದಲ್ಲಿ 11–9–99 ರಿಂದ 17–9–99 ರವರೆಗೆ ಏಳುದಿನಗಳ ಅವಧಿಯಲ್ಲಿ ನೀಡಿದ **'ಮಹಾಭಾರತದಲ್ಲಿ ಭೀಮಸೇನ'** ಎಂಬುದರ ಬಗೆಗಿನ ಪ್ರವಚನಮಾಲಿಕೆಯೇ ಈ ಕೃತಿಯಾಗಿ ರೂಪತಾಳಿದೆ. ಮಹಾಭಾರತದ ಹೆಚ್ಚಿನ ಪರ್ವಗಳಲ್ಲಿ ಪ್ರಸ್ತುತನಾಗಿದ್ದು ತ್ರಿವಿಕ್ರಮರೂಪದಲ್ಲಿ ಆವರಿಸಿರುವ ಭೀಮಸೇನನ ಪಾತ್ರದ ವಾಮನರೂಪ ಇಲ್ಲಿ ಪ್ರತಿಬಿಂಬಿತವಾಗಿದೆ. ಏಳು ದಿನಗಳಲ್ಲಿ ಪ್ರತಿನಿತ್ಯ ಒಂದೂವರೆಗಂಟೆಯಂತೆ, ಒಟ್ಟು ಹತ್ತೂವರೆಗಂಟೆಗಳ ಅವಧಿಯಲ್ಲಿ ಮೂಡಿಬಂದ ಕಿರುಚಿತ್ರಣವಷ್ಟೇ ಇದಾಗಿದೆ. ಮಹಾಭಾರತವನ್ನು **'ಭೀಮವಿಜಯ'** ಎಂದೇ ಗುರುತಿಸುವ ಡಾ||ಪ್ರಭಂಜನಾಚಾರ್ಯರು ಈ ಪ್ರವಚನಮಾಲಿಕೆಯಲ್ಲಿ ಆದಿಪರ್ವದಲ್ಲಿ ಬಂದ ಭೀಮನ ಪಾತ್ರದ ಚಿತ್ರಣಕ್ಕೆ ಹೆಚ್ಚು ಒತ್ತು ಕೊಟ್ಟಿದ್ದು, ಸಭಾಪರ್ವದಲ್ಲಿ ಬಂದ ಭೀಮನ ಪಾತ್ರವನ್ನು ವಿಸ್ತಾರವಾಗಿಯೇ ವಿವರಿಸಿದ್ದು, ಉಳಿದ ಪರ್ವಗಳಲ್ಲಿ ಭೀಮಸೇನನಿಗೆ ಸಂಬಂಧಿಸಿದಂತೆ ಬರುವ ಪ್ರಮುಖ ಘಟನೆಗಳನ್ನಷ್ಟೇ ಆಯ್ಕೆ ಮಾಡಿ, ಅವುಗಳಲ್ಲಿ ಕಾಣಿಸಿಕೊಳ್ಳುವ ಭೀಮಸೇನನ ಪಾತ್ರದ ಬಗ್ಗೆ ವಿವೇಚನೆಯನ್ನು ನೀಡಿರುವರು.

ಪ್ರವಚನದಲ್ಲಿ ವೈಚಾರಿಕತೆಯ ಜೊತೆಗೆ ಭಾವುಕತೆಗೂ ಆದ್ಯತೆಯನ್ನು ನೀಡುವ ಡಾ||ಪ್ರಭಂಜನಾಚಾರ್ಯರು ತಮ್ಮ ಪ್ರವಚನಗಳಲ್ಲಿ ಭೀಮಸೇನನ ಚಿತ್ರಣ ನಡೆಸುವಾಗ ಪ್ರಾಸಂಗಿಕವಾಗಿ ಶ್ರೀಮಧ್ವಾಚಾರ್ಯರ ಚಿತ್ರಣವನ್ನೂ, ಆಂಜನೇಯನ ಮಹಿಮೆಗಳನ್ನೂ ಸರ್ವಮೂಲಗ್ರಂಥಾಧ್ಯಯನದ ಅವಶ್ಯಕತೆಯನ್ನೂ ಉಡುಪಿಯ ಹಿರಿಮೆಯನ್ನೂ, ಏಕಾದಶೀವ್ರತ, ಸಂಧ್ಯಾವಂದನೆ ಮುಂತಾದ ಸದಾಚಾರಗಳ ಅನಿವಾರ್ಯತೆಯನ್ನೂ ವಿವರಿಸಿರುವರು. ನೇರವಾಗಿ ಸಂಬಂಧಿಸುವ ಅಂತಹ ಕೆಲವು ವಿವರಣೆಗಳನ್ನು ಭೀಮಸೇನನ ಪಾತ್ರನಿರೂಪಣೆಯ ಜೊತೆಗೇ ಸಂಯೋಜಿಸಲಾಗಿದೆ. ಪರೋಕ್ಷವಾಗಿಯಷ್ಟೇ ಸಂಬಂಧಿಸುವ ಕೆಲವು ವಿಚಾರಗಳನ್ನು ಪರಿಶಿಷ್ಟದಲ್ಲಿ 'ಮನನೀಯ ಮಾತುಗಳು' ಎಂಬುದಾಗಿ ಸಂಗ್ರಹಿಸಲಾಗಿದೆ.

ಮಹಾಭಾರತದಲ್ಲಿ ಪ್ರಸ್ತುತವಾದ ಭೀಮಸೇನನ ಪಾತ್ರದ ಸಂಕ್ಷಿಪ್ತ ವಿವೇಚನೆ ಇದಾಗಿದ್ದು ಭೀಮಸೇನನ ಪಾತ್ರಕ್ಕೆ ಸಾಮಾನ್ಯವಾಗಿ ಎಂತೆಂತಹ ಸಂದರ್ಭಗಳಲ್ಲಿ ಅಪಚಾರ ಎಸಗಲಾಗಿದೆಯೋ, ಹಾಗೂ ಆ ಪಾತ್ರದ ಮಹತ್ತ್ವವನ್ನು ಸಾರುವ ಯಾವ ಘಟನೆಗಳನ್ನು, ಗಮನಿಸದೆ ಕೈಬಿಡಲಾಗಿದೆಯೋ ಅಂತಹವುಗಳ ಮೇಲೆ ಬೆಳಕು ಚೆಲ್ಲಿ ಭೀಮಸೇನನ **'ಅಖಿಣಾಶ್ಮಸಮ'**ವಾದ, ಹಾಗೂ **'ಜೀವೋತ್ತಮ'**ವಾದ ವ್ಯಕ್ತಿತ್ವವನ್ನು ಅರ್ಥೈಸಿಕೊಳ್ಳಲು ಬೇಕಾದ ಸ್ಫೂರ್ತಿ ಇದರಿಂದ ಪಡೆಯಬಹುದಾಗಿದೆ. ಜೊತೆಗೆ ಅಂತಹ ಭೀಮನ ವ್ಯಕ್ತಿತ್ವವನ್ನು ಕಡೆದು ಕೊಟ್ಟ ಶ್ರೀಮಧ್ವಾಚಾರ್ಯರ ಬಗೆಗೂ ಅವರ ಸರ್ವಮೂಲಗ್ರಂಥಗಳ ಬಗೆಗೂ, ವಿಶೇಷವಾಗಿ **'ಮಹಾಭಾರತತಾತ್ಪರ್ಯನಿರ್ಣಯ'**ದ ಬಗೆಗೂ ಗೌರವಾದರಗಳು ಇದರಿಂದ ಲಭ್ಯವೆನಿಸಿವೆ.

-ಸಗ್ರಿ

# ಮುನ್ನುಡಿ

ಮಹಾಭಾರತವು ಪಾಂಡವ-ಕೌರವ ಸಂಘರ್ಷದ ಅಪೂರ್ವ ಚಿತ್ರಣ. ಈ ಸಂಘರ್ಷದಲ್ಲಿ ಪಾಂಡವರಿಗೇ ಜಯ ಎಂಬುದು ಇದರ ಸಂದೇಶ. ಇಡೀ ಮಹಾಭಾರತ ಒಂದರ್ಥದಲ್ಲಿ ಪಾಂಡವರ ಯಶೋಗಾಥೆ. ಅಧರ್ಮಿಗಳಾದ ಕೌರವರನ್ನು ಶ್ರೀಕೃಷ್ಣನ ಅನುಗ್ರಹದ ಹಿನ್ನೆಲೆಯಲ್ಲಿ ಮೆಟ್ಟಿನಿಂತ ಪಾಂಡವರ ಸಾಹಸ, ಧರ್ಮದ ಹಿರಿಮೆಯನ್ನು ಸಾರುವ ಜಾಗತಿಕ ಸಂದೇಶ. ಪಾಂಡವರಲ್ಲೂ ಧರ್ಮರಾಜನನ್ನು ಮಹಾರಾಜ ಎಂಬ ಕಾರಣದಿಂದಲೂ, ಅರ್ಜುನನನ್ನು ಶ್ರೇಷ್ಠ ಅಸ್ತ್ರಜ್ಞ ಎಂಬ ಕಾರಣದಿಂದಲೂ ಜನ ಗುರುತಿಸಿ ಗೌರವಿಸಿದ್ದಾರೆ. ಆದರೆ ಇವರಿಬ್ಬರಿಗೂ ಬೆಂಗಾವಲಾಗಿದ್ದು ನಿಜಕ್ಕೂ ವಿಜಯದ ರೂವಾರಿಯಾದವನು ಇವರಿಬ್ಬರ ನಡುವಿನ ಭೀಮಸೇನ. ತತ್ತ್ವಜ್ಞಾನ, ಭಗವದ್ಭಕ್ತಿ, ವಿಷಯವಿರಕ್ತಿ, ಬಾಹುಬಲ, ಧೈರ್ಯ, ಸ್ಥೈರ್ಯ, ಸಾಹಸ ಮೊದಲಾದ ಸಕಲ ಸದ್ಗುಣಗಳ ಖಣಿ. ರಾಮಾಯಣದ ಹನುಮಂತನ ಪಾತ್ರಕ್ಕಿರುವ ಮಹತ್ತ್ವ ಮಹಾಭಾರತದ ಭೀಮನ ಪಾತ್ರಕ್ಕಿದೆ. ಇಬ್ಬರೂ ಜಗತ್ಪ್ರಾಣನಾದ ಮುಖ್ಯಪ್ರಾಣನ ಅವತಾರ. ಮಹಾಭಾರತದ ವನಪರ್ವದಲ್ಲಿ ಈ ಎರಡೂ ರೂಪಗಳು ಪರಸ್ಪರ ಸಂಧಿಸಿದ ಅಪೂರ್ವ ಪ್ರಸಂಗ ನಿರೂಪಿತವಾಗಿದೆ. ಆಗ ಹನುಮಂತನ ಬಾಲವನ್ನು ಭೀಮನಿಗೆ ಎತ್ತಿಡಲು, ಸರಿಸಲು ಆಗಲಿಲ್ಲ. ಹನುಮಂತನ ಸ್ವರೂಪಪರಿಜ್ಞಾನ ಭೀಮನಿಗೆ ಅನಂತರ ಆಯಿತು ಮೊದಲಾದ ವಿವರಗಳು ಅಲ್ಲಿವೆ. ಆದರೆ ಅವೆಲ್ಲಾ ಅವರಿಬ್ಬರೂ ಮಾಡಿದ ವಿನೋದ; ಕೆಲವು ಜನಕ್ಕೆ ಭ್ರಾಮಕ. ಕಾಲಕಳೆದಂತೆ ಶಕ್ತಿಜ್ಞಾನಾದಿಗಳು ಕುಗ್ಗುತ್ತವೆ ಎಂಬ ತತ್ತ್ವವನ್ನು ತೋರಿಸಲು ಭಗವಂತ ವಿಧಿಸಿರುವ ಶಾಸನ ಇಂತಹ ವಿನೋದಕ್ಕೆ ಮೂಲ. ಸ್ವತಃ ಭಗವಂತನು ರಾಮ-ಪರಶುರಾಮ, ವಾಸಿಷ್ಠಕೃಷ್ಣ-ಯಾದವಕೃಷ್ಣ, ಶ್ರೀನಿವಾಸ-ಭೂವರಾಹ ರೂಪಗಳಿಂದ ಹಾಗೆ ನಟಿಸಿರುವನು. ಮಹಾಲಕ್ಷ್ಮಿಯ ರುಗ್ಮಿಣಿ-ಸತ್ಯಭಾಮಾ ರೂಪಗಳು ಇಂತಹ ಮತ್ತೊಂದು ನಿದರ್ಶನ.

ಇಂತಹ ಪಾತ್ರದ ವಿಶ್ಲೇಷಣೆಗೆ ಹೆಚ್ಚು ಒತ್ತು ಕೊಟ್ಟ ಚಿಂತಕರು ತುಂಬಾ ಕಡಿಮೆ. ಭಾಸ, ಭಟ್ಟನಾರಾಯಣ, ರನ್ನನಂತಹ ಮಹಾಕವಿಗಳು ಈ ಪಾತ್ರಕ್ಕೆ ಪ್ರಾಧಾನ್ಯ ಕೊಡುವ ನಿಟ್ಟಿನಲ್ಲಿ ಪ್ರಯತ್ನಿಸಿಯೂ ಸಫಲರಾಗದೆ, ದುರ್ಯೋಧನನ ಪರವೇ ಜನ ಸಹಾನುಭೂತಿಯನ್ನು ತಳೆಯುವಂತೆ ಮಾಡಿಬಿಡುತ್ತದೆ. ಮತ್ತೆ ಕೆಲವರಂತೂ ತುಂಬಾ ಮುಂಗೋಪಿ, ಒರಟ, ಭಯಂಕರ ಆಕೃತಿಯ ಬಾಹುಬಲಮಾತ್ರಸಂಪನ್ನ ಮೊದಲಾಗಿ ಚಿತ್ರಿಸಿ, ಭೀಮನ ಪಾತ್ರಕ್ಕೆ ಅಪಚಾರವನ್ನೇ ಎಸಗಿರುವರು.

ಮಹಾಭಾರತ ಭೀಮನನ್ನು ಭಗವಂತನ ಅನಂತರದ ಮಹಾಪುರುಷನನ್ನಾಗಿ ಚಿತ್ರಿಸಿದೆ. ಜನ್ಮಾರಭ್ಯ ಸ್ವರ್ಗಾರೋಹಣದವರೆಗೂ ವಿಭಿನ್ನ ಪ್ರಸಂಗಗಳಲ್ಲಿ ಈ ಪಾತ್ರ ವರ್ತಿಸುವ ಪರಿ ಅನನ್ಯವಾದದ್ದು. ಅಜಗರಪ್ರಸಂಗ, ಯಕ್ಷಪ್ರಶ್ನೆ ಮೊದಲಾದ

ಸನ್ನಿವೇಶಗಳಲ್ಲಿ ದೋಷಗಳಂತೆ ಮೇಲ್ನೋಟಕ್ಕೆ ತೋರುವ ಅಂಶಗಳು ನಿಜಕ್ಕೂ ಆತನ ವ್ಯಕ್ತಿತ್ವವನ್ನು ಮತ್ತೂ ಎತ್ತರಕ್ಕೇರಿಸುವ ಸದ್ಗುಣಗಳೇ ಆಗಿವೆ ಎಂಬುದು ಮಹಾಭಾರತದ ಹೃದಯ. ಭೀಮ ಅಸ್ತ್ರಜ್ಞನಲ್ಲ ಎಂಬ ತಪ್ಪು ಕಲ್ಪನೆ ಜನರಲ್ಲುಂಟು. ಅಶ್ವತ್ಥಾಮರ ಮೇಲೆ ಭೀಮ ಮಾಡಿದ ಅಸ್ತ್ರಯುದ್ಧವನ್ನು ಮಹಾಭಾರತ ಜಾಗತಿಕ ದಾಖಲೆ ಎಂದು ಕೊಂಡಾಡಿದೆ; [1]ಪಂಪಭಾರತದಲ್ಲೂ ಅದರ ಪ್ರಶಂಸೆ ಬಂದಿದೆ. ಭೀಮನು ತಾನು ಬಿಟ್ಟ ಬಾಣವನ್ನು ಅದು ಗುರಿ ಸೇರುವ ಮುನ್ನವೇ ಧಾವಿಸಿ ಮರಳಿ ತಂದ ಅದ್ಭುತ ಪ್ರಸಂಗವೂ[2] ಉಂಟು. ಗೀತೆ ಕೇಳಿಯೂ ಅರ್ಜುನ ತನ್ನ ಮಗ ಅಭಿಮನ್ಯುವಿನ ಮರಣ ದುಃಖವನ್ನು ಸಹಿಸದೆ ಶೋಕಿಸಿದ; ಆದರೆ ತನ್ನ ಮಗ ಘಟೋತ್ಕಚ ಸತ್ತಾಗಲೂ ಅಳದ ಪಂಡಿತವರೇಣ್ಯ ಭೀಮಸೇನ.

ಈ ನಿಟ್ಟಿನಲ್ಲಿ ಭೀಮನ ಪಾತ್ರದ ಸಮಗ್ರ ವಿಶ್ಲೇಷಣೆಯನ್ನು ಒದಗಿಸಿದ ಶ್ರೇಯಸ್ಸು ಶ್ರೀಮಧ್ವಾಚಾರ್ಯರಿಗೇ ಸಲ್ಲುವುದು. ಅವರ ಮಹಾಭಾರತತಾತ್ಪರ್ಯನಿರ್ಣಯ ಮಹಾಭಾರತದ ಬಗ್ಗೆ ರಚಿತವಾದ ಗ್ರಂಥಗಳಲ್ಲೆಲ್ಲ ಅಗ್ರಮಾನ್ಯ ಕೃತಿ; ವಿಮರ್ಶೆ, ಚಿಂತನೆ, ವಿಶ್ಲೇಷಣೆ, ಸಂಗ್ರಹ, ಸಮನ್ವಯ, ನಿರೂಪಣೆ, ಪಾತ್ರವಿಶ್ಲೇಷಣೆ, ತಾತ್ತ್ವಿಕ ಮಹತ್ತ್ವ ಮೊದಲಾದ ಪ್ರತಿಯೊಂದು ದೃಷ್ಟಿಯಲ್ಲೂ ಅನುಪಮ ಕೃತಿ. ಇದರ ಬೆಳಕಿನಲ್ಲಿ ಈ ಗ್ರಂಥ ರಚಿತವಾದ ಉಡುಪಿಯಲ್ಲೇ ಭೀಮಸೇನನ ಪಾತ್ರವನ್ನು ಕುರಿತು ಒಂದು ಸಪ್ತಾಹ ಪ್ರವಚನದ ಏರ್ಪಾಟನ್ನು ಮಾಡಿದ ಅನುಗ್ರಹ ಶ್ರೀಪರ್ಯಾಯ ಕಾಣಿಯೂರುಮಠದ **ಶ್ರೀಶ್ರೀವಿದ್ಯಾವಲ್ಲಭತೀರ್ಥಶ್ರೀಚರಣರದು**; ಪ್ರವಚನಮಾಲೆಯನ್ನು ಪುಸ್ತಕರೂಪದಲ್ಲಿ ಪ್ರಕಟಿಸುತ್ತಿರುವ ಕೃಪೆಯೂ ಅವರದೇ. ಅವರಿಗೆ ನನ್ನ ಕೃತಜ್ಞತಾಪೂರ್ವಕ ಅನಂತಪ್ರಣಾಮಗಳು. ಇದನ್ನು ಪ್ರಕಾಶನಕ್ಕೆ ಅನುವಾಗುವಂತೆ ಧ್ವನಿಮುದ್ರಿಕೆಗಳಿಂದ ಸಂಗ್ರಹಿಸಿಕೊಟ್ಟವರು ಆತ್ಮೀಯರಾದ ವಿದ್ವಾನ್ **ಶ್ರೀಸಗ್ರಿರಾಘವೇಂದ್ರ ಉಪಾಧ್ಯಾಯರು;** ಸಹಕರಿಸಿದವರು ವಿದ್ವಾನ್ ಶ್ರೀ ಹೆಚ್. ಕೆ. ಸುರೇಶಾಚಾರ್ಯರು ಮತ್ತು ಆನಂದ ಪದ್ಮನಾಭ. ಡಿ.ಟಿ.ಪಿ. ಕಾರ್ಯ ನಿರ್ವಹಿಸಿರುವವರು **'ರಯಿ ಪ್ರಾಣ'** ಇಂಪ್ರೆಶನ್ಸ್ ಅವರು. ಅಚ್ಚಿನ ಕಾರ್ಯ ರಾಷ್ಟ್ರೋತ್ಥಾನ ಮುದ್ರಣಾಲಯದವರದು. ಇವರೆಲ್ಲರಿಗೂ ನಾನು ಋಣಿ. ಪರಿಮಿತ ಸಮಯದಲ್ಲಿ ನಡೆದ ಪ್ರವಚನಮಾಲೆಯಾದ್ದರಿಂದ ಇದರಲ್ಲಿ ಸಮಗ್ರತೆಯ ಕೊರತೆ ಇದೆ. ಅವಕಾಶ ಒದಗಿದಾಗ ವಿಸ್ತರಿಸುವ ಯೋಜನೆ ಇದೆ. ದೇವರು ಮಾಡಿಸಬೇಕು.

**ಬೆಂಗಳೂರು** **ವ್ಯಾಸನಕೆರೆ ಪ್ರಭಂಜನಾಚಾರ್ಯ**

**7-1-2000**

---

1. ಗದೆಯೊಳೆ ಜಟ್ಟಿಗಂ ಪವನನಂದನನೆಂಬರ ಮಾತು ಮಾತದ
ಲ್ಲದು ಸುರಸಿಂಧುಪುತ್ರ, ಗುರು ಕರ್ಣ ಕೃಪ ಪ್ರಮುಖರ್ಕಳಿಂತು ನೇ।
ರಿದರೆ ಶರಾಸನಾಗಮದೊಳೆಂಬಿನಮಂಬರದೊಳ್ ಸುರರ್ಕಳೇಂ
ಪುದಿದನೊ ಬಾಣಜಾಲದೆ ಗುರುಪ್ರಿಯನಂದನನಂ ಮರುತ್ಸುತಂ॥ (10/67)

2. ಕರ್ಣಾಯತೇ ತೇನ ಶರೇ ವಿಮುಕ್ತೇ ವಿಕಂಪಿತಂ ತಸ್ಯ ಶಿರೋ ಮಯೋಕ್ತಮ್।
ಗತ್ವಾ ತದಾ ತೇನ ಚ ಬಾಣತುಲ್ಯಮಪ್ರಾಪ್ತಲಕ್ಷಃ ಸ ಶರೋ ಗೃಹೀತಃ॥ -ಭಾಸ (ಪಂಚರಾತ್ರ)

# ವ್ಯಾಸಭಾರತದ ಭೀಮಸೇನ

ಮಹಾಭಾರತವು ಲೋಕಮಾನ್ಯ ಗ್ರಂಥ; ಸಾಹಿತ್ಯಲೋಕದ ಅದ್ವಿತೀಯ ಕೃತಿ. ಧರ್ಮಾದಿ ಚತುರ್ವಿಧ ಪುರುಷಾರ್ಥಗಳ ವಿಶ್ವಕೋಶ; ಅಷ್ಟು ಸುದೀರ್ಘವಾದ ಕಥೆ ಮತ್ತೊಂದು ಇಲ್ಲವೇ ಇಲ್ಲ. ಇತಿಹಾಸ, ಕಾವ್ಯ ಹಾಗೂ ಶಾಸ್ತ್ರಗಳ ತ್ರಿವೇಣೀ ಸಂಗಮವಾದ ಈ ಕೃತಿಯಲ್ಲಿ ಬರದ ವಿಚಾರವೇ ಇಲ್ಲ. ಪಾತ್ರವೈವಿಧ್ಯದ ದೃಷ್ಟಿಯಲ್ಲೂ ಇದು ಜಗತ್ತಿನ ಅನುಪಮ ಕೃತಿ. ಭೀಷ್ಮ, ದ್ರೋಣ, ವಿದುರ, ಯುಧಿಷ್ಠಿರ, ಭೀಮ, ಕುಂತಿ, ದ್ರೌಪದಿ, ಕರ್ಣ, ಅರ್ಜುನ, ದುರ್ಯೋಧನ, ಶಕುನಿ ಮೊದಲಾಗಿ ಇಲ್ಲಿಯ ಪ್ರತಿಯೊಂದು ಪಾತ್ರವೂ ಅಪೂರ್ವ.

ಭೀಮಸೇನನ ಪಾತ್ರವಂತೂ ಮಹಾಭಾರತದ ಕೇಂದ್ರ ಬಿಂದು. ರಾಮಾಯಣದಲ್ಲಿನ ರಾಮನ ಪಾತ್ರದಂತೆ ಇಲ್ಲಿಯ ಭೀಮನ ಪಾತ್ರ ಅತ್ಯಂತ ರೋಚಕ. ರಾಮನ ಪಾತ್ರಕ್ಕೆ ಹೇಗೋ ಹಾಗೆಯೇ ಇಲ್ಲಿಯ ಭೀಮಸೇನನ ಪಾತ್ರಕ್ಕೆ ಆಧುನಿಕ ವಿಮರ್ಶಕರಿಂದ ಅನ್ಯಾಯವಾಗಿದೆ; ಅಪಚಾರವಾಗಿದೆ. ಭಾಸ, ಭಟ್ಟನಾರಾಯಣ, ಪಂಪ, ರನ್ನ, ಕುಮಾರವ್ಯಾಸ ಮುಂತಾದ ಶ್ರೇಷ್ಠ ಕವಿಗಳಿಂದಲೂ ಭೀಮಸೇನನ ಪಾತ್ರಕ್ಕೆ ಸೂಕ್ತ ನ್ಯಾಯ ಸಂದಿಲ್ಲ. ಯಕ್ಷಗಾನ ಬಯಲಾಟಗಳು ಸಾಮಾನ್ಯವಾಗಿ ಮುಂಗೋಪಿ, ಹೊಟ್ಟೆಬಾಕ ಮೊದಲಾಗಿ ಭೀಮನನ್ನು ಚಿತ್ರಿಸಿವೆ. ನಾನು ನೋಡಿದ ಒಂದು ಯಕ್ಷಗಾನದಲ್ಲಿ ಅಪ್ಪಟ ವೈಷ್ಣವ ಭೀಮನನ್ನು ವಿಭೂತಿಧಾರಿಯನ್ನಾಗಿ ತೋರಿಸಿದ್ದುಂಟು. ಟಿ. ವಿ. ಮಹಾಭಾರತದಲ್ಲಂತೂ ಇಂತಹ ವಿಕೃತಿ ಅತಿರೇಕವನ್ನೇ ತಲುಪಿದೆ.

ಮೂಲಮಹಾಭಾರತದಲ್ಲಿ ಚಿತ್ರಿತನಾಗಿರುವ ಭೀಮ ಸೌಂದರ್ಯ, ಪರಾಕ್ರಮ, ವಿವೇಕಗಳ ತವರು; ಬಲದ ಸಾಗರ. ಜ್ಞಾನ, ಭಕ್ತಿ, ವಿರಕ್ತಿಗಳ ತ್ರಿವೇಣೀಸಂಗಮ. ಎಂದೂ ಧರ್ಮದ ಹಾದಿ ತಪ್ಪದ ಪರಿಶುದ್ಧ ಮಹಾಚೇತನ. ಅಧರ್ಮಕ್ಕೆ ತಲೆಬಾಗದೆ ಜೀವನದುದ್ದಕ್ಕೂ ಮೃಗರಾಜನಂತೆ ಇತರ ಎಲ್ಲ ಪಾತ್ರಗಳನ್ನೂ ಮೆಟ್ಟಿ ನಿಂತ ಮೇರುವ್ಯಕ್ತಿತ್ವ ಇವನದು. ಬಲ, ಪೌರುಷ, ವಿವೇಕಗಳ

ಸಾಕಾರಮೂರ್ತಿ. ಆದರ್ಶ ಸಹೋದರನಾಗಿ, ದ್ರೌಪದಿಯ ಪ್ರಿಯಪತಿಯಾಗಿ, ಗುರುಹಿರಿಯರಿಗೆ ಸೂಕ್ತ ಗೌರವ ತೋರುವ ವಿನಯದ ಮೂರ್ತಿಯಾಗಿ, ಅಪ್ರತಿಮ ಕೃಷ್ಣಭಕ್ತನಾಗಿ, ಭೀಮನೇರಿರುವ ಎತ್ತರ ವಿಶ್ವದ ದಾಖಲೆಯಾಗಿದೆ. ಭಗವಂತನಿಗೆ ಸದಾ ಮಣಿಯುವ ಆಶ್ರಿತರನ್ನು ಪುತ್ರವಾತ್ಸಲ್ಯದಿಂದ ಕಾಣುವ ಕರುಣೆಯ ಪ್ರತಿರೂಪ. ಅಧರ್ಮವೆಂದರೆ ಸಿಡಿದೇಳುತ್ತ ಅಧರ್ಮಿಗಳನ್ನು ಪ್ರತಿಭಟಿಸುತ್ತ ಭಗವಂತನನ್ನು ಆರಾಧಿಸಿದ ಅಪೂರ್ವ ಗುಣನಿಧಿ. ಕೌರವರಂಥ ಅಧರ್ಮಿಗಳಿಗೆ ಜೀವನದುದ್ದಕ್ಕೂ ಸಿಂಹಸ್ವಪ್ನವಾಗಿ ಅವರ ಅವಸಾನಕ್ಕೆ ಕಾರಣನಾದ ಲೋಕರಕ್ಷಕ.

ಮೂಲಮಹಾಭಾರತದ ಆಧಾರದಲ್ಲಿ ವಿಶ್ಲೇಷಣೆ ನಡೆಸಿದರಷ್ಟೇ ಭೀಮಸೇನನ ಇಂತಹ ವ್ಯಕ್ತಿತ್ವವನ್ನು ಯಥಾವತ್ತಾಗಿ ತಿಳಿಯಲು ಸಾಧ್ಯ. ಅಂತಹ ವಿಶ್ಲೇಷಣೆಯನ್ನು ನಡೆಸಿದ ಏಕಮಾತ್ರ ಕೃತಿ ಶ್ರೀಮಧ್ವಾಚಾರ್ಯರ **'ಮಹಾಭಾರತತಾತ್ಪರ್ಯನಿರ್ಣಯ'** – ಮೂಲಮಹಾಭಾರತಕ್ಕನುಗುಣವಾಗಿಯೇ ಭೀಮಸೇನನ ಪಾತ್ರದ ಚಿತ್ರಣ ಮಹಾಭಾರತತಾತ್ಪರ್ಯನಿರ್ಣಯದಲ್ಲಿ ನಡೆದಿದೆ. ಶ್ರೀಮಧ್ವಾಚಾರ್ಯರು ಭೀಮಸೇನನ ಅವತಾರವೇ ಆದ್ದರಿಂದ ಅವರ ಕೃತಿ ಭೀಮನೇ ಕಂಡ ಮಹಾಭಾರತವಾಗಿ ಅತ್ಯಂತ ರೋಚಕವೆನಿಸುತ್ತದೆ. ಇದರಲ್ಲಿ ಭೀಮನ ಪಾತ್ರಕ್ಕೆ ಮಾತ್ರವಲ್ಲದೆ ಭೀಷ್ಮ, ಕರ್ಣ ಮೊದಲಾದ ಸಕಲ ಪಾತ್ರಗಳಿಗೂ ನ್ಯಾಯ ಸಂದಿದೆ. ಅಷ್ಟು ವ್ಯಾಪಕವಾಗಿ ಸಂಶೋಧನೆ, ವಿಶ್ಲೇಷಣೆ ಹಾಗೂ ತಾತ್ತ್ವಿಕ ವಿವೇಚನೆಗಳನ್ನು ವ್ಯಾಸಭಾರತದ ಮೇಲೆ ನಡೆಸಿದ ಮತ್ತೊಂದು ಕೃತಿಯೇ ಇಲ್ಲ.

ಮಹಾಭಾರತದ ರಚನೆಯಾದದ್ದು ಬದರೀಕ್ಷೇತ್ರದಲ್ಲಿ. ಅದು ಭರತಖಂಡದ ಅತ್ಯಂತ ಪವಿತ್ರ ಕ್ಷೇತ್ರ. ಭೀಮನ ಅವತಾರ ಭೂಮಿ. ಮಹಾಭಾರತದ ತಾತ್ಪರ್ಯನಿರ್ಣಯ ರಚಿತವಾದದ್ದು ಉಡುಪಿಯಲ್ಲಿ. ಇದು ಮಧ್ವರ ಅವತಾರಭೂಮಿ. ರಜತಪೀಠವಾಗಿದ್ದ ಉಡುಪಿ ಶ್ರೀಮಧ್ವರ ಸರ್ವಮೂಲಗ್ರಂಥಗಳಿಂದಾಗಿ ಸುವರ್ಣಪೀಠವಾಗಿದೆ.

## ಭೀಮಸೇನನ ಅವತಾರದ ಸಂಕೀರ್ಣ ಸಂದರ್ಭ

ದೀಪದ ಬೆಲೆ ಕತ್ತಲಲ್ಲೇ ಚೆನ್ನಾಗಿ ತಿಳಿಯುವುದು. ಅಂತೆಯೇ ಮಹಾಭಾರತದಲ್ಲಿ ಭೀಮಸೇನನ ಮಹತ್ತ್ವ ಸ್ಪಷ್ಟವಾಗಬೇಕಾದರೆ ಅವನು ಅವತರಿಸಿದ ಸಂದರ್ಭವನ್ನು ಪರಿಶೀಲಿಸಬೇಕು:

**ಯದಾ ಯದಾ ಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ ।**
**ಅಭ್ಯುತ್ಥಾನಮಧರ್ಮಸ್ಯ ತದಾऽऽತ್ಮಾನಂ ಸೃಜಾಮ್ಯಹಮ್॥** – ಗೀತಾ

– ಎಂಬುದಾಗಿ ಧರ್ಮಕ್ಕೆ ಹಾನಿಯಾಗಿ, ಅಧರ್ಮದ ವಿಜೃಂಭಣೆ ನಡೆದಾಗ ತಾನು ಅವತರಿಸುವೆನೆಂದು ಹೇಳಿದ ಶ್ರೀಕೃಷ್ಣ ಅವತರಿಸಿದ ಐದುತಿಂಗಳುಗಳು ಮುಂಚಿತವಾಗಿ ಅವತರಿಸಿದವನು ಭೀಮಸೇನ. ಎಂದರೆ ಶ್ರೀಕೃಷ್ಣನು ಅವತರಿಸಲು ಕಾರಣವಾಗಿದ್ದ ಸಂದರ್ಭವೇ ಭೀಮಸೇನನ ಅವತಾರದ ಕಾಲದಲ್ಲೂ ಇತ್ತೆಂಬುದು ಸ್ಪಷ್ಟ. ಕಂಸಾದಿ ದುಷ್ಟರದು ಒಂದು ಗುಂಪಾದರೆ, ಜರಾಸಂಧಾದಿ ದುಷ್ಟರದು ಮತ್ತೊಂದು ಗುಂಪು. ಶ್ರೀಕೃಷ್ಣ '**ಜಾತಃ ಕಂಸವಧಾರ್ಥಾಯ...**' ಎಂದಿರುವಂತೆ ಕಂಸನ ಸಂಹಾರಕ್ಕಾಗಿ ಅವತರಿಸಿದ್ದರೆ, ಭೀಮಸೇನ '**ಜಾತಃ ಜರಾಸಂಧವಧಾರ್ಥಾಯ**' '**ಕೌರವಾಣಾಂ ವಿನಾಶಾಯ....**' ಜರಾಸಂಧನ ಸಂಹಾರಕ್ಕಾಗಿ, ಕೌರವಾದಿಗಳ ವಿನಾಶಕ್ಕಾಗಿ ಅವತರಿಸಿದವನು.

ಪಾಂಡವರು ಎಲ್ಲಿ ಜನಿಸಿದರು ಎಂಬುದರ ಬಗ್ಗೆ ಹೆಚ್ಚಿನವರು ಗಮನ ಹರಿಸಿಲ್ಲ. ಮಹಾಭಾರತ ತಿಳಿಸಿರುವಂತೆ ಬದರಿಕ್ಷೇತ್ರದ ನಾರಾಯಣಾಶ್ರಮ ಅವರ ಅವತಾರಭೂಮಿ. ಎಂದರೆ ಬದರಿಯಂಥ ಪವಿತ್ರಕ್ಷೇತ್ರದಲ್ಲಿ ಅವತರಿಸಿದ ಪಾವನಮೂರ್ತಿ ಭೀಮಸೇನ. ಅವರ ಹಿಂದಿನ ಅವತಾರ ಹನುಮಂತನು ಬದರೀ ನಿವಾಸಿ. ಅನಂತರದ ಅವತಾರ ಮಧ್ವರ ಪ್ರಮುಖ ಕಾರ್ಯಕ್ಷೇತ್ರವೂ ಬದರಿಯೇ ಎಂಬುದನ್ನು ಗಮನಿಸಬೇಕು.

ಪಾಂಡುರಾಜ ತನ್ನ ಪತ್ನಿಯರ ಜೊತೆ ಆಗ ಅಲ್ಲಿ ವಾಸವಾಗಿದ್ದನು. ಕಿಂದಮ ಋಷಿಗಳ ಶಾಪ(ಸ್ತ್ರಿಯಾಯುಜ್ ಮರಿಷ್ಯಸಿ)ಕ್ಕೊಳಗಾಗಿದ್ದರಿಂದ ಅವನು ತನ್ನ ಪತ್ನಿಯರ ಮೂಲಕ ಮಕ್ಕಳನ್ನು ಪಡೆಯುವಂತಿರಲಿಲ್ಲ. ತಮ್ಮ ಸಂತಾನ ಪರಂಪರೆ ನಿಂತುಹೋಗಬಾರದು, ಮಕ್ಕಳನ್ನು ಪಡೆಯಬೇಕು; ಆಗ ಪಾಂಡು ಕುಂತಿಯ ಜೊತೆಗೆ ಸಮಾಲೋಚನೆ ನಡೆಸುವನು. ರಾಜವಂಶ ನಿರ್ವಂಶವಾಗುವ ಸಂದರ್ಭದಲ್ಲಿ ನಿಯೋಗ ಪದ್ಧತಿಯ ಮೂಲಕ ಮಕ್ಕಳನ್ನು ಪಡೆಯುವ ಕ್ರಮ ಇತ್ತು. ಆದರೆ ಪಾಂಡವರು ನಿಯೋಗ ಪದ್ಧತಿಯ ಮೂಲಕ ಹುಟ್ಟಿದವರಲ್ಲ. ಮಕ್ಕಳ ಬಗ್ಗೆ ಸಮಾಲೋಚನೆ ನಡೆಸುತ್ತಿದ್ದಾಗ ಕುಂತಿ ಹೇಳುತ್ತಾಳೆ –'ನನಗೆ ದುರ್ವಾಸರು ಮಂತ್ರ ಉಪದೇಶಿಸಿದ್ದಾರೆ. ಅದರ ಬಲದಿಂದ ದೇವತೆಗಳನ್ನು ಕರೆದು ಅವರಿಂದ ಮಕ್ಕಳನ್ನು ಪಡೆಯಬಹುದು' – ಎಂದು. ಈ ಮಾತನ್ನು ಕೇಳಿ ಪಾಂಡುರಾಜನಿಗೆ ತುಂಬಾ ಸಂತೋಷವಾಗುತ್ತದೆ. '**ನಮೋ ಮಹರ್ಷಯೇ ತಸ್ಮೈ ಯೇನ ದತ್ತೋ ವರಸ್ತವ**' ನಿನಗೆ ಇಂತಹ ವರಕೊಟ್ಟ ಆ ಮುನಿಗೆ ಪ್ರಣಾಮ – ಎಂದು ಉದ್ಗರಿಸುತ್ತಾನೆ.

ಪುತ್ರಪ್ರಾಪ್ತಿಗಾಗಿ ಯಾವ ದೇವತೆಯನ್ನು ಆಹ್ವಾನಿಸಬೇಕು ? ರಾಜನಾಗಿ ಮೆರೆಯಬೇಕಾದ ಪುತ್ರನಿಂದ ವಿಶೇಷವಾಗಿ ಧರ್ಮದ ರಕ್ಷಣೆ ಆಗಬೇಕು. ಅಲ್ಲದೆ, "... **ನ ಧರ್ಮತೋ ವಿನಾ ಭುವಃ। ನೃಪೋಽಭಿರಕ್ಷಿತಾ ಭವೇತ್..**" ಧರ್ಮವಿಲ್ಲದೆ ರಾಜನಾದವನು ಭೂಮಿಯನ್ನು ಚೆನ್ನಾಗಿ ರಕ್ಷಿಸಲು ಸಾಧ್ಯವೇ ಇಲ್ಲ. ಆದ್ದರಿಂದ ಹುಟ್ಟುವ ಪುತ್ರ ತುಂಬಾ ಧಾರ್ಮಿಕನಾಗಿರಬೇಕು. ಯಮಧರ್ಮನನ್ನೇ ಕರೆದರೆ ಅವನಿಂದ ಹುಟ್ಟುವ ಪುತ್ರ ಒಳ್ಳೆಯ ಧಾರ್ಮಿಕನಾಗಿರಬಲ್ಲ– ಎಂದು ಪಾಂಡು ಯಮಧರ್ಮನನ್ನು ಕರೆಯಲು ತಿಳಿಸುವನು. ಮಹಾಭಾರತದ ಈ ಭಾಗದಿಂದ ಯಮಧರ್ಮನ ವ್ಯಕ್ತಿತ್ವವನ್ನು ಸರಿಯಾಗಿ ತಿಳಿದುಕೊಳ್ಳಬಹುದಾಗಿದೆ. ಯಮ ಎಂದಕೂಡಲೇ ಭಯಂಕರ ದೇವತೆ ಎಂದು ಭಾವಿಸುವುದುಂಟು. ಆದರೆ ಅವನು ಧರ್ಮದೇವತೆ. ಧಾರ್ಮಿಕರ ಪಾಲಿಗೆ ಸೌಮ್ಯಸ್ವರೂಪಿ. ಅಧಾರ್ಮಿಕರ ಪಾಲಿಗಷ್ಟೇ ಅವರ ಅಧರ್ಮಾನುಷ್ಠಾನಕ್ಕಾಗಿ ದಂಡನೆ ನೀಡುವುದರಿಂದ 'ಭಯಂಕರ'ನಾಗಿ ಕಾಣಿಸುವನಷ್ಟೇ. ಇಂತಹ ಯಮಧರ್ಮನಿಂದ ಧರ್ಮದ ಸಂರಕ್ಷಣೆಗಾಗಿ ಜನಿಸಿದ ಪುತ್ರನೇ ಯುಧಿಷ್ಠಿರ.

### ಕುರುಪಾಂಡವರ ಜನನದ ಹಿನ್ನೆಲೆ

ಕುಂತಿ ಯುಧಿಷ್ಠಿರನನ್ನು ಪಡೆಯುವ ಮುಂಚೆ ಒಮ್ಮೆ ವೇದವ್ಯಾಸರು ಗಾಂಧಾರಿಯಲ್ಲಿಗೆ ಹೋಗುವರು. ತಾವು ಹಸಿವು ನೀರಡಿಕೆಗಳಿಂದ ಪೀಡಿತರಾಗಿರುವಂತೆ ತೋರಿಸಿಕೊಳ್ಳುವರು. ಗಾಂಧಾರಿ ಅವರಿಗೆ ನೀರು ಹಣ್ಣುಗಳನ್ನು ಕೊಟ್ಟು ತಾನು ಅವರ ಹಸಿವು, ನೀರಡಿಕೆಗಳನ್ನು ಪರಿಹರಿಸಿದೆ ಎಂದು ಭಾವಿಸುವಳು. ವೇದವ್ಯಾಸರು ಅವಳಿಗೆ ಅವಳ ಅಪೇಕ್ಷೆಯಂತೆ ಅವಳಗಂಡನಂತಹ ನೂರು ಮಕ್ಕಳನ್ನು ಪಡೆಯುವ ವರವನ್ನು ಅನುಗ್ರಹಿಸುವರು. ಆ ವರದ ಬಲದಿಂದ ಹುಟ್ಟುವ ದುರ್ಯೋಧನಾದಿಗಳು ಕುರುಡುತನದ ವಿಷಯದಲ್ಲಿ ತಮ್ಮ ತಂದೆ ಧೃತರಾಷ್ಟ್ರನಿಗೆ ಸದೃಶರಾದವರು. ದುರ್ಯೋಧನಾದಿಗಳಿಗೆ ಹೊರಗಿನ ಕಣ್ಣು ಇದ್ದಿರಬಹುದು. ಆದರೆ **'ಅಂತರಂಗದಲಿ ಹರಿಯ ಕಾಣದವ ಹುಟ್ಟು ಕುರುಡನೋ'**– ಎಂದು ವ್ಯಾಸರಾಯರು ತಿಳಿಸಿದಂತೆ ಎದುರಿಗೇ ಇದ್ದ ಶ್ರೀಕೃಷ್ಣನ ವ್ಯಕ್ತಿತ್ವವನ್ನು ಗುರುತಿಸದ ಅವರು ಧೃತರಾಷ್ಟ್ರನಿಗಿಂತಲೂ ಮಿಗಿಲಾದ ಹುಟ್ಟುಕುರುಡರೇ ಸರಿ. ಅವರು ಸ್ವರೂಪತಃ ಮಿಥ್ಯಾಜ್ಞಾನಿಗಳಾದ ಅಸುರರೇ ಅಲ್ಲವೇ ?

ಕುಂತಿ ಮಗುವನ್ನು ಹೆತ್ತರೂ, ಅವಳಿಗಿಂತ ಮುಂಚಿತವಾಗಿಯೇ ಗರ್ಭ ಧರಿಸಿದ ತನ್ನ ಗರ್ಭದಿಂದ ಮಗು ಇನ್ನೂ ಹೊರಬಂದಿಲ್ಲ ಎಂದು

ಮತ್ಸರಕ್ಕೊಳಗಾದ ಗಾಂಧಾರಿ ತನ್ನ ಗರ್ಭವನ್ನು ಹೊಸಕಿಕೊಳ್ಳುವಳು. ಇದರಿಂದ ಮಾಂಸದ ಪಿಂಡವೊಂದು ಹೊರಹೊಮ್ಮುವುದು. ಕೂಡಲೇ ಅಲ್ಲಿ ಪ್ರತ್ಯಕ್ಷರಾದ ವೇದವ್ಯಾಸರು ಆ ಮಾಂಸಪಿಂಡವನ್ನು ನೂರು ಹೋಳು ಮಾಡಿ ನೂರು ಮಡಿಕೆಗಳಲ್ಲಿ ತುಂಬಿಸಿಡುವರು. ಅದರಿಂದ ಕ್ರಮೇಣ ದುರ್ಯೋಧನಾದಿ ನೂರು ಗಂಡುಮಕ್ಕಳು, ದುಶ್ಶಲೆ ಎಂಬ ಒಬ್ಬ ಹೆಣ್ಣುಮಗಳು ಹುಟ್ಟುವರು. **'ಸ ರಕ್ಷಿತಾ ರಕ್ಷತಿ ಯೋ ಹಿ ಗರ್ಭೇ'** ಎಂಬ ಮಾತು ಸಾರುವಂತೆ ತನ್ನ ರಕ್ಷಣಾ ಸಾಮರ್ಥ್ಯವನ್ನು ದುರ್ಯೋಧನಾದಿಗಳ ರಕ್ಷಣೆಯಲ್ಲಿ ಶ್ರೀವೇದವ್ಯಾಸರು ತೋರಿಸಿರುವರು. **'ಸ ದೇವಕಾರ್ಯಸಿದ್ಧ್ಯರ್ಥೇ ರರಕ್ಷ ಗರ್ಭಮೀಶ್ವರಃ'** – ಎಂದಿರುವಂತೆ ಪಾಂಡವರ ಬಲ, ಹಿರಿಮೆ, ಗರಿಮೆಗಳ ಪ್ರಕಟಣೆಗೆ ಅವಕಾಶ ದೊರಕಬೇಕೆಂದು ದುರ್ಯೋಧನಾದಿಗಳನ್ನು ಶ್ರೀವೇದವ್ಯಾಸರು ರಕ್ಷಿಸಿದರು ಎಂದು ತಿಳಿಯಬೇಕು.

ಗಾಂಧಾರಿಯ ಮತ್ಸರದಿಂದಾಗಿ ಹುಟ್ಟಿದ ದುರ್ಯೋಧನಾದಿಗಳು ತಮ್ಮ ಜೀವನಪೂರ್ತಿ ಪಾಂಡವರ ಮೇಲಿನ ಮತ್ಸರದಿಂದಲೇ ನಡೆದುಕೊಂಡು, ಅವರಿಂದಾಗಿಯೇ ಕೊನೆಗೆ ದುರಂತಕ್ಕೊಳಗಾಗುವಂತಾಯಿತೆಂದು ಭಾವಿಸುವುದುಂಟು. ಆದರೆ ಹಾಗಲ್ಲ, ಗಾಂಧಾರಿಯಂತಹ ಪತಿವ್ರತೆಯೂ ತನ್ನ ಗರ್ಭವನ್ನೇ ಹಿಸುಕಿಕೊಳ್ಳುವಷ್ಟು ಮತ್ಸರಕ್ಕೊಳಗಾದದ್ದು ಅವಳ ಹೊಟ್ಟೆಯಲ್ಲಿದ್ದ ದುಷ್ಟಮಕ್ಕಳ ದುಷ್ಟ ಪ್ರಭಾವಕ್ಕೊಳಗಾಗಿ. ಹೊಟ್ಟೆಯಲ್ಲಿರುವುದೇ ತಲೆಯಲ್ಲಿ ಕಾಣಿಸಿಕೊಳ್ಳುವುದು. ಅದಕ್ಕಾಗಿಯೇ ಶಾಸ್ತ್ರವು ಸದ್ವಿಚಾರಕ್ಕಾಗಿ ಒಳ್ಳೆಯ ಆಹಾರಕ್ಕೆ ಒತ್ತು ಕೊಟ್ಟಿದೆ.

### ಉಪಾಸನೆಗನುಗುಣವಾದ ಫಲ

ಶ್ರೀವೇದವ್ಯಾಸರ ವರಬಲದಿಂದ ಹುಟ್ಟಿದವರು ದುರ್ಯೋಧನಾದಿಗಳು. ದುರ್ವಾಸರ ಮಂತ್ರಬಲದಿಂದ ಹುಟ್ಟಿದವರು ಪಾಂಡವರು. ಸಾಕ್ಷಾನ್ನಾರಾಯಣನ ಅವತಾರವಾದ ಶ್ರೀವೇದವ್ಯಾಸರು ದುರ್ವಾಸರಿಗಿಂತ ಅನಂತಪಟ್ಟು ಎತ್ತರದಲ್ಲಿರುವವರು. ಹೀಗಿರುವಾಗ ದುಷ್ಟತನದಲ್ಲಿ ದಾಖಲೆ ಮಾಡಿದ ದುರ್ಯೋಧನಾದಿಗಳು ಶ್ರೀವೇದವ್ಯಾಸರ ವರಬಲದಿಂದ ಹೇಗೆ ಹುಟ್ಟಿದರು? ದುರ್ವಾಸರ ಅನುಗ್ರಹದಿಂದ ಒಳ್ಳೇತನದಲ್ಲಿ ದಾಖಲೆ ಮಾಡಿದ ಪಾಂಡವರು ಹೇಗೆ ಹುಟ್ಟಿದರು ? – ಎಂಬ ಸಂದೇಹಕ್ಕೆ ಇಲ್ಲಿ ಅವಕಾಶ ಉಂಟು.

ಆದರೆ ಯಾವ ದೇವತೆಯನ್ನು ಉಪಾಸಿಸಲಾಗಿದೆ ಎಂಬುದರಷ್ಟೆ ಆ ದೇವತೆಯನ್ನು ಹೇಗೆ ಉಪಾಸಿಸಲಾಗಿದೆ ಎಂಬುದೂ ಅಷ್ಟೇ ಮುಖ್ಯ. ಗಾಂಧಾರಿ

ಸರ್ವೋತ್ತಮರಾದ ವೇದವ್ಯಾಸರ ಉಪಾಸನೆಯನ್ನೇ ನಡೆಸಿದ್ದರೂ, ಅವರು ಹಸಿವು ನೀರಡಿಕೆಗಳಿಗೆ ಒಳಗಾದವರೆಂದೂ, ತನ್ನ ಉಪಚಾರದಿಂದಾಗಿ ಅವುಗಳ ಶಮನಕ್ಕೊಳಗಾದವರೆಂದೂ ಆಕೆ ಭಾವಿಸಿದ್ದರಿಂದ, ಅಂತಹ ಅಸದುಪಾಸನೆಗನುಗುಣವಾಗಿ ಕೆಟ್ಟ ಮಕ್ಕಳನ್ನೇ ಅವಳು ಪಡೆಯುವಂತಾಯಿತು. ಆದರೆ ಕುಂತಿ ದುರ್ವಾಸರನ್ನು ಮನೋಭಿಮಾನಿ ರುದ್ರದೇವರ ಅಂಶಸಂಭೂತರೆಂದೇ ಉಪಾಸನೆ ಮಾಡಿ, ಅಂತಹ ಯಥಾರ್ಥ ಉಪಾಸನೆಗನುಗುಣವಾಗಿ ಅವರ ಮಂತ್ರಗಳಿಂದ ಒಳ್ಳೆಯ ಮಕ್ಕಳನ್ನು ಪಡೆದಳು. **'ಸ ವತ್ಸರತ್ರಯೋದಶಂ ತಯಾ ಯಥಾವದರ್ಚಿತಃ'** – ಎಂಬ ಮಾತಿನಲ್ಲಿ ಕುಂತಿಯ ಉಪಾಸನೆ ಶಾಸ್ತ್ರವಿಹಿತರೀತಿಯದಾಗಿದ್ದಿತೆಂದು ಶ್ರೀಮದಾಚಾರ್ಯರು ನಿರ್ಣಯಿಸಿರುವರು.

## ಭೀಮಸೇನನ ಜನ್ಮವೈಖರಿ

ಹೀಗೆ ಶ್ರೀವೇದವ್ಯಾಸರ ಅಸದುಪಾಸನೆಯ ಫಲವಾಗಿ ದುರ್ಯೋಧನಾದಿಗಳ ಜನನವಾಗಿದೆ. ಯಮಧರ್ಮನಿಂದ ಯುಧಿಷ್ಠಿರನನ್ನು ಪುತ್ರನನ್ನಾಗಿ ಪಡೆದ ಪಾಂಡುರಾಜ ಒಂದು ವರ್ಷದ ಬಳಿಕ ಪುನಃ ಕುಂತಿಯ ಜೊತೆಗೆ ಸಮಾಲೋಚನೆ ನಡೆಸುವನು. ಮಹಾಭಾರತ ಮೂಲದಲ್ಲಿನ ವಿವರಗಳನ್ನು ಶ್ರೀಮದಾಚಾರ್ಯರು ಒಂದೇ ಮಾತಿನಲ್ಲಿ ಹೀಗೆ ಸಂಗ್ರಹಿಸಿರುವರು: – **'ಬಾಹ್ವೋರ್ಬಲಾಜ್ಜ್ಞಾನಬಲಾಚ್ಚ ಧರ್ಮಃ । ರಕ್ಷ್ಯೋಽನ್ಯಥಾ ನಾಶಮುಪೈತಿ'**. ಧರ್ಮದ ರಕ್ಷಣೆ ಮೊದಲು ಆಗಬೇಕು. ಧರ್ಮದ ರಕ್ಷಣೆ ಆಗಬೇಕಾದರೆ ಬಾಹುಬಲವೂ ಬೇಕು; ಜ್ಞಾನಬಲವೂ ಬೇಕು. ಧರ್ಮದ ಸ್ವರೂಪವನ್ನು ತಿಳಿಯಲು ಜ್ಞಾನಬಲ ಬೇಕಾದರೆ, ಆ ನಿಯಮಗಳನ್ನು ಪ್ರಜೆಗಳ ಆಚರಣೆಗೆ ಬರುವಂತೆ ಮಾಡಬೇಕಾದರೆ ಅದಕ್ಕೆ ತಕ್ಕ ಬಾಹುಬಲವೂ ಬೇಕು. ಈ ಎರಡೂ ಬಲಗಳನ್ನು ಹೊಂದಿರುವ ದೇವತೆ ಎಂದರೆ ವಾಯುದೇವ. ಈ ಸಂದರ್ಭದಲ್ಲಿ ವಾಯುದೇವನ ಹಿರಿಮೆಯನ್ನು ತಿಳಿಸುವ ಮಹಾಭಾರತದ ಶ್ಲೋಕಗಳು ಹೀಗಿವೆ:

> **ಅಶ್ವಮೇಧಃ ಕ್ರತುಶ್ರೇಷ್ಠೋ ಜ್ಯೋತಿಃಶ್ರೇಷ್ಠೋ ದಿವಾಕರಃ ।**
> **ಬ್ರಾಹ್ಮಣೋ ದ್ವಿಪದಾಂ ಶ್ರೇಷ್ಠೋ ದೇವಶ್ರೇಷ್ಠಸ್ತು ಮಾರುತಃ ।'**
> **ಬಲಮಿಂದ್ರಸ್ಯ ಗಿರಿಶೋ ಗಿರಿಶಸ್ಯ ಬಲಂ ಮರುತ್।**
> **ಬಲಂ ತಸ್ಯ ಹರಿಃ ಸಾಕ್ಷಾನ್ನ ಹರೇರ್ಬಲಮನ್ಯತಃ॥**

ಯಾಗಗಳಲ್ಲೆಲ್ಲಾ ಅಶ್ವಮೇಧವು ಶ್ರೇಷ್ಠವೆನಿಸಿರುವಂತೆ, ಜ್ಯೋತಿಗಳಲ್ಲಿ ಸೂರ್ಯನು ಶ್ರೇಷ್ಠ ಎನಿಸಿರುವಂತೆ, ಎರಡು ಕಾಲುಳ್ಳವವರಲ್ಲೆಲ್ಲ ಬ್ರಾಹ್ಮಣನು ಶ್ರೇಷ್ಠ ಎನಿಸಿರುವಂತೆ ವಾಯುದೇವನು ದೇವತೆಗಳಲ್ಲಿ ಶ್ರೇಷ್ಠನಾಗಿರುವನು. ಇತರ ಸಕಲ ದೇವತೆಗಳಿಗೆ ಬಲವಾಗಿರುವ ಇಂದ್ರನಿಗೆ ಶಿವನು ಬಲ, ಶಿವನಿಗೆ ವಾಯುವು ಬಲ, ವಾಯುವಿಗೆ ಶ್ರೀಹರಿಯು ಬಲ; ಅವನಿಗೆ ಮಾತ್ರ ಬೇರಾರ ಬಲವೂ ಬೇಕಿಲ್ಲ; ಅವನು ಸ್ವತಂತ್ರ.

ಪಾಂಡು ಹೀಗೆ ವಾಯುದೇವನ ಹಿರಿಮೆಯನ್ನು ತಿಳಿದಿರಬೇಕೆಂದರೆ ಅವಶ್ಯವಾಗಿ ಅವನು ವೇದೋಪನಿಷತ್ತುಗಳಂತೆ ರಾಮಾಯಣದಲ್ಲೂ ಪಾರಂಗತನಾಗಿದ್ದಿರಬೇಕು. ಅದು ಮಹಾಭಾರತಕ್ಕಿಂತ ಮುಂಚಿನದಲ್ಲವೇ? ಅದರಲ್ಲಿ ದೇವೇಂದ್ರ, ಸೂರ್ಯ ಮುಂತಾದ ದೇವತೆಗಳೇ ಸುಗ್ರೀವ, ವಾಲಿ ಮುಂತಾದ ರೂಪದಲ್ಲಿದ್ದರೂ ಹನುಮಂತನಷ್ಟು ಶ್ರೀರಾಮಸೇವೆಯನ್ನು ಬೇರೆ ಯಾರೂ ಮಾಡಲಿಲ್ಲ. ಅವನಷ್ಟು ಶ್ರೀರಾಮನ ಪ್ರೀತಿಗೆ ಪಾತ್ರರಾದವರೂ ಯಾರೂ ಇಲ್ಲ. ಇವನ್ನೆಲ್ಲ ಪರಿಶೀಲಿಸಿದ್ದ ಪಾಂಡು ವಾಯುದೇವನ ಹಿರಿಮೆ ಗರಿಮೆಗಳನ್ನು ಚೆನ್ನಾಗಿ ತಿಳಿದಿದ್ದನು. ಆದುದರಿಂದಲೇ ಮತ್ತೊಬ್ಬ ಮಗನನ್ನು ವಾಯುದೇವನಿಂದ ಪಡೆಯಲು ಅವನು ತಿಳಿಸುವನು. ಕುಂತಿ ದುರ್ವಾಸರು ಉಪದೇಶಿಸಿದ ಮಂತ್ರದ ಮೂಲಕ ವಾಯುದೇವನನ್ನು ಸ್ಮರಿಸುವಳು. ಕೂಡಲೇ ವಾಯುದೇವರು ಪ್ರತ್ಯಕ್ಷರಾಗುವರು. ಸಾವಿರಾರು ಮೈಲಿ ದೂರದ ದೇಶದಲ್ಲಿರುವ ವ್ಯಕ್ತಿಯ ಜೊತೆಗೂ ಟೆಲಿಫೋನಿನ ಮೂಲಕ ಕ್ಷಣಮಾತ್ರದಲ್ಲಿ ಇಂದು ಸಂಪರ್ಕಿಸಬಹುದಾಗಿರುವಂತೆ ದೂರದಲ್ಲಿರುವ ದೇವತೆಗಳನ್ನೂ ಕೂಡಲೇ ಸಂಪರ್ಕಿಸಬಹುದು. ಟೆಲಿಫೋನಿನ ನಂಬರ್ ಬಲ್ಲ ಪರಿಚಿತನಿಗೆ ಮಾತ್ರ ಹೇಗೋ ಹಾಗೆ ಸಂಪರ್ಕಿಸಬಹುದಾಗಿದೆ. ದೇವತೆಗಳನ್ನು ಕರೆಯುವ ಅರ್ಹತೆ ಹಾಗೂ ಮಂತ್ರವನ್ನು ತಿಳಿದವರಷ್ಟೇ ಹೀಗೆ ದೇವತೆಗಳ ಸಂಪರ್ಕ ಪಡೆಯಬಹುದು. ಕುಂತಿಗೆ ಅಂತಹ ಮಂತ್ರವನ್ನು ದುರ್ವಾಸರು ಉಪದೇಶಿಸಿದ್ದರು. ತಕ್ಷಣ ಕುಂತಿ ವಾಯುದೇವನನ್ನು ಕರೆಯುವಂತಾದುದರಲ್ಲಿ ದುರ್ವಾಸರ ಪ್ರಭಾವವಷ್ಟೆ ಪ್ರಧಾನ ಕಾರಣವಾಗಿಲ್ಲ; ಅವರು ಉಪದೇಶಿಸಿದ ಮಂತ್ರಗಳ ಮಹಿಮೆ ಅದು. 'ನ ವಿಲಕ್ಷಣತ್ವಾತ್..' ಎಂಬ ಬ್ರಹ್ಮಸೂತ್ರದಲ್ಲಿ ಅಪೌರುಷೇಯ ವಾಙ್ಮಯಕ್ಕೆ ಸೇರಿದ ಮಂತ್ರಾದಿಗಳ ವಿಲಕ್ಷಣ ಸಾಮರ್ಥ್ಯವನ್ನು ಸೂಚಿಸಲಾಗಿದೆ. 'ಸ್ಪೃಷ್ಟ್ವೈವ ಯಂ ಪ್ರೀತಿಮತಾಽನಿಲೇನ ನರೇಂದ್ರಕಾಂತಾ ಸುಷುವೇಽತ್ರ ಕುಂತೀ' – ಎಂದು

ಸುಮಧ್ವವಿಜಯದಲ್ಲಿ ತಿಳಿಸಿರುವಂತೆ ವಾಯುದೇವರು ತಮ್ಮ ಸ್ಪರ್ಶಮಾತ್ರದಿಂದ ಕುಂತಿಯಲ್ಲಿಮಗು ಹುಟ್ಟುವಂತೆ ಮಾಡಿರುವರು.

ಹೀಗೆ ವಾಯುದೇವನಿಂದ ಕುಂತಿಯಲ್ಲಿ ಭೀಮನ ಜನನವಾಗಿದೆ. 'ಭೀಮ' ಎಂದರೆ ಭಯಂಕರ ಎಂದರ್ಥವೂ ಇದೆ.. ಆ ಅರ್ಥವನ್ನು ಮಾತ್ರ ಗಮನದಲ್ಲಿಟ್ಟುಕೊಂಡು ಅನೇಕರು ಭೀಮಸೇನನ ಆಕೃತಿ ಭಯಂಕರ ಎಂಬ ಭಾವನೆಯನ್ನು ಹೆಚ್ಚಿನ ಜನ ಹೊಂದಿರುವುದುಂಟು. ಸಿಂಹ ಇತರರಿಗೆಲ್ಲ ಭಯಂಕರವಾದರೂ ತನ್ನ ಮರಿಗಳಿಗೆ ಸೌಮ್ಯವಾಗಿಯೇ ಇರುವುದು. ಅಂತೆಯೇ ದುಷ್ಟರ ಪಾಲಿಗಷ್ಟೇ ಭೀಮ ಭಯಂಕರ. ನಿಜಕ್ಕೂ **'ಭೀಮಸೇನ'** ಎಂಬುದು ಅವನ ವ್ಯಕ್ತಿತ್ವವನ್ನು ಎತ್ತಿ ತೋರಿಸುವ ನಾಮ. **'ಭೃತಾ ಮಾಃ ಸಕಲಾ ಹಿ ಯಸ್ಮಿನ್'** – ಎಲ್ಲ ವಿದ್ಯೆಗಳೂ ಅವನಲ್ಲಿ ಪರಿಪೂರ್ಣವಾಗಿ ನೆಲೆಸಿವೆ 'ಎಂದರೆ ಅವನು ಪೂರ್ಣಪ್ರಜ್ಞ' ಎಂಬ ಅಭಿಪ್ರಾಯದಲ್ಲಿ ಭೀಮ ಎನ್ನಿಸಿರುವನು. **'ಸ ವಿಷ್ಣುನೇನೇನ ಯುತಃ ಸದೈವ ನಾಮ್ನಾ ಸೇನಃ'** – ಬೌದ್ಧಿಕವಾಗಿ ಯಾವಾಗಲೂ ಭಗವಂತನ ಜೊತೆಗೇ ಇರುವವನು; **'ಶುದ್ಧೇ ಭಾಗವತೇ ಧರ್ಮೇ ನಿರತೋ ಯದ್ ವೃಕೋದರಃ'** ಎಂದಿರುವಂತೆ ಯಾವುದೇ ವಿಷಯದಲ್ಲಿ ಭಗವಂತನ ಅಭಿಪ್ರಾಯಕ್ಕೆ ವಿರುದ್ಧವಾಗಿ ನಡೆದುಕೊಂಡವನಲ್ಲ; ಸದಾ ಭಗವಂತನಿಗೆ ತನ್ನ ನಿಷ್ಠೆಯನ್ನು ಮುಡಿಪಿಟ್ಟವನು ಎಂಬ ಅಭಿಪ್ರಾಯದಲ್ಲಿ **'ಸೇನ'** ಎನ್ನಿಸಿರುವನು. ಹೀಗೆ **'ಭೀಮಶ್ಚಾಸೌ ಸೇನಶ್ಚ ಭೀಮಸೇನಃ'** – ಎಂಬುದಾಗಿ ನಿಷ್ಪನ್ನವಾಗುವ ಭೀಮಸೇನ ನಾಮದ **'ಭೀಮ'** ಎಂಬ ಭಾಗವು ಅವನ ಪೂರ್ಣಪ್ರಜ್ಞತ್ವವನ್ನು ತಿಳಿಸಿದರೆ, **'ಸೇನ'** ಎಂಬ ಭಾಗವು ಅವನ ಭಾಗವತ ಧರ್ಮದ ನಿಷ್ಠೆಯನ್ನು ಸಾರುತ್ತದೆ.

**ಭಕ್ತಿರ್ಜ್ಞಾನಂ ಸವೈರಾಗ್ಯಂ ಪ್ರಜ್ಞಾ ಮೇಧಾ ಧೃತಿಸ್ಥಿತಿಃ।**
**ಯೋಗಃ ಪ್ರಾಣೋ ಬಲಂ ಚೈವ ವೃಕೋದರ ಇತಿ ಸ್ಮೃತಃ॥**

ಭೀಮಸೇನ ಭಕ್ತಿ, ಜ್ಞಾನ, ವಿರಕ್ತಿ, ಪ್ರಜ್ಞಾ, ಮೇಧಾ, ಧೃತಿ, ಸ್ಥಿತಿ, ಯೋಗ, ಪ್ರಾಣ ಮತ್ತು ಬಲ ಎಂಬ ಹತ್ತು ಗುಣಗಳ ಸಮಷ್ಟಿರೂಪದ ಸಂಕೇತ. ಆದ್ದರಿಂದಲೇ ಅವನು ವೃಕೋದರ ಎಂಬ ಅಪೂರ್ವ ಅರ್ಥವನ್ನು ಮಧ್ವಾಚಾರ್ಯರು ತಿಳಿಸಿರುವರು. ಒಟ್ಟಾಗಿ ಭೀಮಸೇನ ತತ್ತ್ವಜ್ಞಾನದ ಸಾಕಾರ ಮೂರ್ತಿ. ಭೀಮನ ಪಾತ್ರದ ವಿಶ್ಲೇಷಣೆಯೆಂದರೆ ತತ್ತ್ವಜ್ಞಾನದ ವೈಭವದ ಪರಿಜ್ಞಾನ ಎಂದೇ ಅರ್ಥ. **'ಭೀಮಸೇನಸಮೋ ನಾಸ್ತಿ '** ಎಂಬುದು **'ನಹಿ ಜ್ಞಾನೇನ ಸದೃಶಂ ಪವಿತ್ರಮಿಹ ವಿದ್ಯತೇ'** ಎಂಬ ಗೀತೋಕ್ತಿಯನ್ನು ಜ್ಞಾಪಿಸುವಂತಹದು.

## ಬಲದ ದಾಖಲೆ

ಹುಟ್ಟುತ್ತಿದ್ದಂತೆಯೇ ಭೀಮಸೇನನಿಂದ ಬಲದ ವಿಷಯದಲ್ಲಿ ದಾಖಲೆ ಸ್ಥಾಪಿತವಾಗಿದೆ. ಬದರಿಯ ಪಾಂಡಕೇಶ್ವರದ ಪಕ್ಕದಲ್ಲಿಯೇ **'ಶತಶೃಂಗ'** ಎಂಬ ಪರ್ವತ ಇದೆ. ಮಗು ಭೀಮಸೇನನನ್ನು ಹಿಡಿದುಕೊಂಡು ಕುಂತಿ ಆ ಪರ್ವತದ ಮೇಲೆ ಇದ್ದಳು. ಆಗ ಹುಲಿಯೊಂದರ ಮೇಲೆ ಪಾಂಡು ಬಾಣ ಪ್ರಯೋಗ ಮಾಡುವನು. ಹುಲಿಯ ಆರ್ತನಾದಕ್ಕೆ ಮೂರ್ಛಿತಳಾಗಿ ಅವಳು ಕುಸಿಯುವಳು. ಮಗು ಕೈಯಿಂದ ಜಾರಿ ಕೆಳಗೆ ಬೀಳುವುದು. ಎಚ್ಚೆತ್ತ ಕುಂತಿ ಕೈಯಿಂದ ಜಾರಿ ಬಿದ್ದ ಮಗುವಿನ ಕಡೆಗೆ ನೋಡುವಳು – ದುಃಖದಿಂದ, ಕುತೂಹಲದಿಂದ, ಆದರೆ! ಅವಳಿಗೆ ತನ್ನ ಕಣ್ಣುಗಳನ್ನು ತನಗೇ ನಂಬಲಿಕ್ಕಾಗಲಿಲ್ಲ. ಮಗುವಿಗೆ ಏನೂ ಆಗಿರಲಿಲ್ಲ, ಶತಶೃಂಗ ಪರ್ವತವೇ ಮಗುವಿನ ಸ್ಪರ್ಶದಿಂದಾಗಿ ನೂರಾರು ಹೋಳಾಗಿತ್ತು. ಮಹಾಭಾರತದ ಎಲ್ಲ ಪ್ರತಿಗಳಲ್ಲೂ ಈ ವಿಚಾರ ಕಾಣಸಿಗುವುದು. ಕುಮಾರವ್ಯಾಸನೂ ತನ್ನ ಕೃತಿಯಲ್ಲಿ ಉಲ್ಲೇಖಿಸಿರುವನು:

> **ಭೀಮ ಬಿದ್ದನು ತೊಡೆಯ ಮೇಲಿಂ**
> **ದೀ ಮಹಿಗೆ ತಚ್ಚೈಲ ಶಿಲೆ ನಿ**
> **ರ್ನಾಮವಾದುದು ಹಸುಳೆ ಹೊರಳಿದು ಬಿದ್ದ ಭಾರದಲಿ ॥**

ದುರ್ಯೋಧನ 'ವಜ್ರಕಾಯ' ಎಂದು ಪ್ರಸಿದ್ಧನಾದವನು. ಆದರೆ ಭೀಮಸೇನನ ದೇಹ ವಜ್ರಕ್ಕಿಂತಲೂ ದೃಢ, ವಜ್ರಾಯುಧದಿಂದ ದೇವೇಂದ್ರ ಪರ್ವತಗಳ ರೆಕ್ಕೆಗಳನ್ನಷ್ಟೇ ತುಂಡರಿಸಲು ಸಮರ್ಥನಾದರೆ ಭೀಮಸೇನ ತನ್ನ ದೇಹದ ಸ್ಪರ್ಶ ಮಾತ್ರದಿಂದ ಪರ್ವತವನ್ನೇ ಪುಡಿಪುಡಿ ಮಾಡಿದನು.

> **ಇಂದ್ರಾಯುಧಂ ಹೀಂದ್ರಕರಾಭಿನುನ್ನಂ ಚಿಚ್ಛೇದ ಪಕ್ಷಾನ್ ಕ್ಷಿತಿಧಾರಿಣಾಂ ಪ್ರಾಕ್।**
> **ಬಿಭೇದ ಭೂಭೃದ್ವಪುರಂಗಸಂಗಾಚ್ಚಿತ್ರಂ ಸ ಪನ್ನೋ ಜನನೀಕರಾಗ್ರಾತ್॥**

– ಎಂಬ ಪದ್ಯದಲ್ಲಿ ನಾರಾಯಣಪಂಡಿತರು ಇದನ್ನೇ ತಿಳಿಸಿರುವರು.

ಹುಟ್ಟಿದ ಮಗು ಹೀಗೆ ಕೆಳಗೆ ಬಿದ್ದರೂ ಯಾವುದೇ ವಿಕಾರಕ್ಕೊಳಗಾಗದಿದ್ದುದ್ದನ್ನು ಕಂಡ ಕುಂತಿ ಭೀಮನ ವೈಭವವನ್ನು ಚೆನ್ನಾಗಿ ಅರ್ಥಮಾಡಿಕೊಂಡು ಜೀವನವಿಡೀ ನಿರ್ಭೀತಳಾಗಿ ಬದುಕಿದಳು. ಭೀಮಸೇನನ ವ್ಯಕ್ತಿತ್ವವನ್ನು ಚೆನ್ನಾಗಿ ಅರ್ಥಮಾಡಿಕೊಂಡ ಯಾರೇ ಆಗಲೀ ಭಯಕ್ಕೊಳಗಾಗುವ ಪ್ರಸಂಗವೇ ಇಲ್ಲ. **'ಅಂಜಿಕಿನ್ಯಾತಕಯ್ಯ ಸಜ್ಜನರಿಗೆ ಭಯವು ಇನ್ಯಾತಕಯ್ಯ'** – ಎಂದು ದಾಸರು ತಿಳಿಸಿರುವರು. **'ಪಾಪಂ ಪ್ರಣಶ್ಯತಿ ವೃಕೋದರಕೀರ್ತನೇನ'** – ಎಂಬ

ಮಹಾಭಾರತದ ಮಾತಿನ ಅಭಿಪ್ರಾಯವನ್ನೇ ಶ್ರೀಪುರಂದರದಾಸರು ತಿಳಿಸಿರುವರು. 'ಕನಸಿಲಿ ಮನಸಿಲಿ ಕಳವಳವಾದರೆ ..... ಭೀಮನ ನೆನೆದರೆ ಬಿಟ್ಟು ಹೋಗದೇ ಭೀತಿ'. ಹೀಗೆ ಭೀಮ ಶಬ್ದಕ್ಕೆ 'ಭೀಃ ಮಾ' – ಸಜ್ಜನರ ಭಯವನ್ನು ದೂರ ಮಾಡುವವನು ಎಂಬ ಅರ್ಥವೂ ಆಗುವುದು:

**ಭವದವೋಷ್ಣೇನ ತಾತಪ್ಯಮಾನಾನ್ ಭುವಿ ಪರಂ ನಾಥಮಪ್ರೇಕ್ಷಮಾಣಾನ್।**
**ಭುವನಮಾನ್ಯೇನ ಚಾನ್ಯೇನ ದೋಷ್ಣಾ ಭವತು ಭೀರ್ಮೇತಿ ನಃ ಸಾಂತ್ವಯಂತಮ್।**
**ಪ್ರಣತವಾನ್ ಪ್ರಾಣಿನಾಂ ಪ್ರಾಣಭೂತಂ ಪ್ರಣತಿಭಿಃ ಪ್ರೀಣಯೇ ಪೂರ್ಣಬೋಧಮ್ ॥**

– ಶ್ರೀಮಧ್ವಾಚಾರ್ಯರ ಕುರಿತು ಹೊರಟ ಈ ಸ್ತುತಿ ಅವರದ್ದೇ ಆದ ಭೀಮರೂಪಕ್ಕೂ ಅನ್ವಯಿಸುತ್ತದೆ. ಸಾಂಸಾರಿಕ ಕಾಡ್ಗಿಚ್ಚಿಗೆ ಸಿಲುಕಿ ಬಳಲುತ್ತಿರುವ, ಅನಾಥಪ್ರಜ್ಞೆಗೊಳಗಾದ ಸಜ್ಜನರಿಗೆ ಅಭಯದಾನ ಮಾಡುತ್ತಿರುವವನು ಭೀಮಸೇನ. '**ಅಭಯಂ ಸತ್ವಸಂಶುದ್ಧಿಃ..**' ಎಂಬುದಾಗಿ ದೈವೀಸಂಪತ್ತುಗಳಲ್ಲಿ ಮೊತ್ತ ಮೊದಲನೆಯದಾಗಿ ಗೀತೆಯಲ್ಲಿ ಉಲ್ಲೇಖಿಸಲ್ಪಟ್ಟದ್ದು 'ಅಭಯ'– ಇದು ಭೀಮಸೇನನಲ್ಲಿ ಪೂರ್ಣಪ್ರಮಾಣದಲ್ಲಿ ಇದ್ದದ್ದರಿಂದಲೇ ಉಳಿದವರಿಗೂ ಅವನು ಅಭಯಪ್ರದಾನ ಮಾಡುವನು. ಅವನ ಹೆಸರನ್ನು ಸ್ಮರಿಸುವುದರಿಂದಲೇ ದುಷ್ಟಶಕ್ತಿಗಳು ದೂರಸರಿಯುವವಾದ್ದರಿಂದ ಪಾಪ ಹಾಗೂ ಭಯ ಪರಿಹೃತವಾಗುವವು.

ಭೀಮ ಹುಟ್ಟಿದಾಕ್ಷಣ ಹೊಸ ವಾತಾವರಣ ನಿರ್ಮಾಣವಾಯಿತು. ದೈತ್ಯರ ಮನಸ್ಸಿನಲ್ಲಿ ಅವ್ಯಕ್ತವಾದ ಭಯ ಹುಟ್ಟಿಕೊಂಡಿತು. ದೇವತೆಗಳ ಸಜ್ಜನರ ಮನಸ್ಸಿನಲ್ಲಿ ಅವ್ಯಕ್ತ ಆನಂದ ಉಂಟಾಯಿತು. ಸೂರ್ಯನ ಉದಯವಾದಾಕ್ಷಣ ಕಳ್ಳರಿಗೆ ತಮ್ಮ ಚಟುವಟಿಕೆಯನ್ನು ಮುಂದುವರೆಸುವಂತಿಲ್ಲ ಎಂದು ಭಯ ಉಂಟಾದರೆ, ಕಮಲಗಳು ಹರ್ಷದಿಂದ ಅರಳಿ ನಿಲ್ಲುವವಲ್ಲವೇ? ಭೀಮಸೇನನ ಹುಟ್ಟಿನ ಮತ್ತೊಂದು ಪರಿಣಾಮ – **ತಜ್ಜನ್ಮಮಾತ್ರೇಣ ಧರಾ ವಿದಾರಿತಾ** – ಅವನ ಭಾರಕ್ಕೆ ಭೂಮಿ ಬಿರಿಯಿತು. ಅವನ ಬಲವನ್ನು ಸೂಚಿಸುವ ಮತ್ತೊಂದು ಘಟನೆ ಇದು.

ಇಷ್ಟು ಮಾತ್ರಕ್ಕೆ ಭೀಮಸೇನನಲ್ಲಿ ಬಲ ಮಾತ್ರ ಇತ್ತೆಂದು ಭಾವಿಸಬಾರದು. ಮಹಾಭಾರತವೇ ಘೋಷಿಸುತ್ತಿದೆ:

**ತತ್ತ್ವಜ್ಞಾನೇ ವಿಷ್ಣುಭಕ್ತೌ ಸ್ಥೈರ್ಯೇ ಧೈರ್ಯೇ ಪರಾಕ್ರಮೇ ।**
**ವೇಗೇ ಚ ಲಾಘವೇ ಚೈವ ಪ್ರಲಾಪಸ್ಯ ಚ ವರ್ಜನೇ ॥**
**ಭೀಮಸೇನಸಮೋ ನಾಸ್ತಿ ಸೇನಯೋರುಭಯೋರಪಿ ।**
**ಪಾಂಡಿತ್ಯೇ ಚ ಪಟುತ್ವೇ ಚ ಶೂರತ್ವೇಽಪಿ ಬಲೇಽಪಿ ಚ ॥**

ತತ್ತ್ವಜ್ಞಾನದಲ್ಲಾಗಲೀ, ವಿಷ್ಣುಭಕ್ತಿಯಲ್ಲಾಗಲೀ ಸ್ಥಿರತೆಯಲ್ಲಾಗಲೀ, ಪರಾಕ್ರಮದಲ್ಲಾಗಲೀ, ವೇಗದಲ್ಲಾಗಲೀ, ದೈಹಿಕವಾಗಿ ಹಗುರವಾಗುವಿಕೆಯಲ್ಲಾಗಲೀ, ವ್ಯರ್ಥಮಾತುಗಳನ್ನು ಆಡದಿರುವುದರಲ್ಲಾಗಲೀ, ಪಾಂಡಿತ್ಯದಲ್ಲಾಗಲೀ, ಕೌಶಲದಲ್ಲಾಗಲೀ, ಶೌರ್ಯದಲ್ಲಾಗಲೀ, ಬಲದಲ್ಲಾಗಲೀ – ಪಾಂಡವ ಕೌರವಸೇನೆಗಳೆರಡರಲ್ಲೂ ಭೀಮಸೇನನಿಗೆ ಸರಿದೂಗುವ ವ್ಯಕ್ತಿಯೇ ಮತ್ತೊಬ್ಬನಿಲ್ಲ. ಕೌರವ ಪಾಂಡವ ಸೇನೆ ಎಂದರೆ ಅಸುರ ಸುರರ ಸಮಾವೇಶ. ಇದರಲ್ಲಿ ಸದೃಶ ವ್ಯಕ್ತಿ ಇಲ್ಲ ಎಂದರೆ ಎಲ್ಲ ಜೀವರಲ್ಲೂ ಅವನಿಗೆ ಸಮನಾದವನು ಮತ್ತೊಬ್ಬನಿಲ್ಲ; ಅವನು ಸಕಲ ಜೀವೋತ್ತಮ ಎಂದೇ ಅರ್ಥ:

**ಜ್ಞಾನೇ ವಿರಾಗೇ ಹರಿಭಕ್ತಿಭಾವೇ ಧೃತಿಸ್ಥಿತಿಪ್ರಾಣಬಲೇಷು ಯೋಗೇ ।**
**ಬುದ್ಧೌ ಚ ನಾನ್ಯೋ ಹನುಮತ್ಸಮಾನಃ ಪುಮಾನ್ ಕದಾಚಿತ್ ಕ್ವಚ ಕಶ್ಚ ನೈವ ॥**

–ಎಂದು ಜ್ಞಾನಾದಿ ಸಕಲಗುಣಗಳಲ್ಲಿ ಹನುಮಂತನಿಗೆ ಸದೃಶನಾದ ವ್ಯಕ್ತಿಯೇ ಇಲ್ಲ ಎಂಬ ಪ್ರಶಂಸೆಯ ಮಾತು ಇದೆ. ಆದರೆ ಆ ಹನುಮಂತನೇ ಈ ಭೀಮಸೇನ; ಈ ಭೀಮಸೇನನೇ ಆ ಹನುಮಂತನಾಗಿರುವುದರಿಂದ ಅಂತಹವರಿಗೆ ಸರಿದೂಗುವ ವ್ಯಕ್ತಿ ಮತ್ತೊಬ್ಬನಿಲ್ಲ ಎಂಬ ಎರಡು ಮಾತುಗಳೂ ಪರಸ್ಪರ ವಿರುದ್ಧ ಎನಿಸಲಾರವು.

## ಭೀಮಸೇನನ ಬಾಲಲೀಲೆಗಳು

ಕೆಲವರಲ್ಲಿ ಅಸಾಧಾರಣಬಲವೇನೋ ಇರಬಹುದು. ಆದರೆ ಅದು ವರದ ಬಲದಿಂದಲೋ, ತಪಸ್ಸಿನ ಬಲದಿಂದಲೋ ಪ್ರಾಪ್ತವಾಗಿರುತ್ತದೆ. ಆದರೆ ಭೀಮಸೇನನಬಲ ಸ್ವಾಭಾವಿಕವಾದುದು. ಭೀಮಸೇನನಿಗೆ ಹದಿನೈದುವರ್ಷ ವಯಸ್ಸಾಗುವವರೆಗೂ ಪಾಂಡವರು ಅರಣ್ಯದಲ್ಲೇ ಇರುವವರು. ಭೀಮಸೇನ ಅರಣ್ಯದಲ್ಲಿ ಸಿಂಹದ ಹಿಂಡುಗಳನ್ನೇ ನಿಗ್ರಹಿಸುತ್ತಿದ್ದನು. **'ಕೈಶೋರಲೀಲಾಂ ಹತಸಿಂಹಸಂಘಾಂ ವನೇ ಪ್ರವೃತ್ತಾಂ ಸ್ಮರತಿ ಸ್ಮ ಸೂತ್ಕಃ'** – ಎಂಬ ಸುಮಧ್ವವಿಜಯದ ಮಾತಿನಲ್ಲಿ ಭೀಮಸೇನ ಕಿಶೋರನಾಗಿರುವಾಗಲೇ ಬರೀ ಒಂದೆರಡು ಸಿಂಹಗಳನ್ನಲ್ಲ; ಸಿಂಹಗಳ ಹಿಂಡುಗಳನ್ನೇ ಸದೆ ಬಡೆಯುತ್ತಿದ್ದ – ಎಂದು ಉಲ್ಲೇಖಿಸಲಾಗಿದೆ. ಭರತವಂಶದಲ್ಲಿಯೇ ಬಂದ 'ಸರ್ವದಮನ' ಒಂದೆರಡು ಸಿಂಹಗಳನ್ನು ನಿಗ್ರಹಿಸುತ್ತಿದ್ದರೆ, ಭೀಮ ಸಿಂಹಗಳ ಸಂಘವನ್ನೇ ಕೊಂದು ಹಾಕುತ್ತಿದ್ದ. ಭೀಮಸೇನನ ಈ ಬಾಲ್ಯಲೀಲೆಯನ್ನು ಪಂಪನೂ ವರ್ಣಿಸಿರುವನು. ಅವನ

ಭಾರತದಲ್ಲಿಯೂ ಇದರ ವರ್ಣನೆ ಬಂದಿದೆ. ಭೀಮನ ನಡಿಗೆಗೆ ಕಲ್ಲುಗಳು ಒಡೆದು ಪುಡಿಯಾಗುತ್ತಿದ್ದವು, ಆನೆಗಳ ಬೆನ್ನೇರಿದರೆ ಅವು ಅರಚಿ ಸತ್ತು ಬೀಳುತ್ತಿದ್ದವು. ಬಾಲಭೀಮನ ಪೌರುಷಕ್ಕೆ ಅಂಜಿ ಅಲ್ಲಿನ ಸಿಂಹಗಳು ಬೇರೊಂದು ಕಾಡಿಗೆ ವಲಸೆ ಹೋದವು ಎಂದು ಪಂಪಭಾರತದಲ್ಲಿ ವರ್ಣಿಸಲ್ಪಟ್ಟಿದೆ:

**ನಡೆವ ತಳರ್ನಡೆಯೊಳ್ ಪುಡಿಪುಡಿಯಾದವು ಶಿಲೆಗಳೊಡೆದು ಕರಿಗಳ್ ಭೀಮಂ।**
**ಪಿಡಿದಡದರ್ೊಡೆ ಬಾಯ್ವಿಟ್ಟೆಲ್ವಡಗಾದುವು ಮುದ್ದದಂತು ಸೊಗಯಿಸವೇಡಾ॥**
**ಮುನಿವನಮನೆ ಬಿಸುಟುವು ಮುಂಮುನಿಯರ ಸೋಂಕಿಲೊಳೆ ಬಳೆದ ಸಿಂಗಂಗಳ್ ಮು।**
**ದ್ದಿನೊಳಡರ್ವ ಪಿಡಿದ ಗಿರ್ದುವ ಮನೆಗೆ ಎವನಿತರ್ಕಮಲಸಿ ಮರುದಾತ್ಮಜನಾ॥** (2/ 5, 6)

ಭೀಮಸೇನ ಅದ್ವಿತೀಯವ್ಯಾಕರಣಪಂಡಿತನಾಗಿದ್ದ ಎಂಬುದಾಗಿಯೂ ಪಂಪಭಾರತದಲ್ಲಿದೆ:

**'ಭೀಮಸೇನಂ ವ್ಯಾಕರಣದೊಳಾರಿಂದ ಮಗ್ಗಳಂ ಕುಶಲನಾದಂ'** (2/ 37)

## ಹಸ್ತಿನಾಪುರದಲ್ಲಿ ಭೀಮವೈಭವ

ಪಾಂಡುವಿನ ಮರಣದ ಬಳಿಕ ಋಷಿಗಳು ಯುಧಿಷ್ಠಿರಾದಿಗಳನ್ನು ಹಸ್ತಿನಾಪುರಕ್ಕೆ ಕರೆದೊಯ್ದರು. ಅಂತಹ ಪಾಂಡವರನ್ನು, ಅವರಲ್ಲಿಯೂ ವಿಶೇಷವಾಗಿ ಭೀಮಸೇನನನ್ನು ಕಂಡಾಕ್ಷಣ, ಇವರಿಂದ ತಮ್ಮ ರಾಜ್ಯಪ್ರಾಪ್ತಿಗೆ ಅವಕಾಶ ತಪ್ಪುವುದೆಂದು ಅಂಜಿದ ದುರ್ಯೋಧನನು 'ಅವರು ಪಾಂಡುವಿನ ಮಕ್ಕಳೇ ಅಲ್ಲ' ಎಂದು ಕಲಹಪ್ರವೃತ್ತಿಯಲ್ಲಿ ತೊಡಗುವನು. ಶ್ರೀವೇದವ್ಯಾಸರೇ ಬಂದು ಪಾಂಡವರ ಕೈ ಹಿಡಿದುಕೊಂಡು ನೇರವಾಗಿ ಪಾಂಡುವಿನ ಭವನಕ್ಕೆ ಕರೆದೊಯ್ದಾಗ ಪಾಂಡವರ ಅಧಿಕೃತ ಮೂಲದ ಬಗ್ಗೆ ಮತ್ತೆ ಯಾರೂ ಏನೂ ತಕರಾರು ಎತ್ತಲಾಗಲಿಲ್ಲ.

ಹೀಗೆ ಈ ನಿಟ್ಟಿನಲ್ಲಿ ಹತಾಶರಾದ ದುರ್ಯೋಧನಾದಿಗಳು ಆಟಪಾಠಗಳ ನೆಪದಲ್ಲಾದರೂ ಪಾಂಡವರನ್ನು, ವಿಶೇಷವಾಗಿ ಭೀಮಸೇನನನ್ನು ಮುಗಿಸಿಯೇ ಬಿಡಬೇಕೆಂದು ಕುತಂತ್ರ ಹೂಡಲು ತೊಡಗುವರು. ಆದ್ದರಿಂದ ಪಾಂಡವರು – ಕೌರವರು ಕುರುಕ್ಷೇತ್ರದಲ್ಲಿ ಮಾತ್ರ **'ಸಮವೇತಾ ಯುಯುತ್ಸವಃ'** ಎಂದಂತೆ ಯುದ್ಧಕ್ಕೆ ಅಣಿಯಾಗಿ ನಿಂತವರಲ್ಲ; ಹಸ್ತಿನಾಪುರದಲ್ಲಿಯೇ, ಬಾಲ್ಯದಿಂದಲೇ ಹೋರಾಟವನ್ನು ನಡೆಸುತ್ತಾ ಬಂದವರು. ಧರ್ಮಾಧರ್ಮಗಳ ತಿಕ್ಕಾಟ ಯಾವಾಗಲೂ ಇರುವಂತಹುದು. ಧರ್ಮ ಅಧರ್ಮವನ್ನು ಮೆಟ್ಟಿನಿಂತು ಮೆರೆಯಲು ಹವಣಿಸುತ್ತಿದ್ದರೆ, ಅಧರ್ಮ ಧರ್ಮವನ್ನು ಮುಗಿಸಿಯೇ ಬಿಡಬೇಕೆಂದು

ಹಾತೊರೆಯುತ್ತಿರುತ್ತದೆ. ಯಾಕೆಂದರೆ ಧರ್ಮದ ಪ್ರವೃತ್ತಿ ವಿವೇಕ ಪೂರ್ವಕವಾದುದು. ಅಧರ್ಮದ ಪ್ರವೃತ್ತಿ ಅವಿವೇಕದ್ದು.

ದುರ್ಯೋಧನಾದಿಗಳು ನೂರು ಮಂದಿ; ಪಾಂಡವರು ಐದೇ ಜನ. ಅವರಲ್ಲೂ ವಿಶೇಷವಾಗಿ ಭೀಮಸೇನನ ಮೇಲೆ ದುರ್ಯೋಧನಾದಿಗಳ ಹಗೆ. ಮೊದಲು ತೇಜೋವಧೆ ಮಾಡಿ ಬಳಿಕ ದೈಹಿಕ ವಧೆ ಮಾಡಬೇಕೆಂದು ಅವರು ಸಂಚು ಹೂಡಿದ್ದರು. ಆಟಪಾಠಗಳಲ್ಲಿ ಸೋಲಿಸಿದಲ್ಲಿ ತೇಜೋವಧೆ ಆಗುತ್ತದೆ. ಆದರೆ ಓಡುವುದು, ಹಿಡಿಯುವುದು ಒದೆಯುವುದು ಹೀಗೆ ಯಾವುದರಲ್ಲೂ ಅವರಿಗೆ ಭೀಮಸೇನನನ್ನು ಸೋಲಿಸಲಾಗುವುದಿಲ್ಲ. ಮಹಾಭಾರತವು ಮುಕ್ತಕಂಠದಿಂದ ಭೀಮಸೇನನನ್ನು ಪ್ರಶಂಸಿಸುತ್ತದೆ:

**ಜವೇ ಲಕ್ಷ್ಯಾಭಿಹರಣೇ ಭೋಜ್ಯೇ ಪಾಂಸುವಿಕರ್ಷಣೇ।**
**ಧಾರ್ತರಾಷ್ಟ್ರಾನ್ ಭೀಮಸೇನಃ ಸರ್ವಾನ್ ಸ ಪರಿಮರ್ದತಿ॥**
**ನ ತೇ ನಿಯುದ್ಧೇ ನ ಜವೇ ನ ಯೋಗ್ಯಾಸು ಕದಾಚನ।**
**ಕುಮಾರಾ ಉತ್ತರಂ ಚಕ್ರುಃ ಸ್ಪರ್ಧಮಾನಾ ವೃಕೋದರಮ್॥**

ಎರಡು ಗುಂಪುಗಳಲ್ಲಿ ನಡೆಯುವ ಹೋರಾಟದಲ್ಲಿ, ಇಬ್ಬರ ನಡುವೆ ನಡೆಯುವ ದ್ವಂದ್ವಯುದ್ಧದಲ್ಲಿ, ಹಾರಾಟದಲ್ಲಿ, ನೀರಾಟದಲ್ಲಿ ಓಟದಲ್ಲಿ ದುರ್ಯೋಧನಾದಿಗಳೆಲ್ಲರನ್ನೂ ಭೀಮಸೇನನೊಬ್ಬನೇ ಸೋಲಿಸುತ್ತಿದ್ದನು:

**ಯುದ್ಧೇ ನಿಯುದ್ಧ ಉತ ಧಾವನ ಉತ್ಪ್ಲವೇ ಚ ಪಾರಿಪ್ಲವೇ ಚ ನಿಖಿಲಾನ್ಸಹಿತಾನ್ ಕುಮಾರಾನ್ ।**
**ಏಕೋ ಜಿಗಾಯ ತರಸಾ ಪರಮಾರ್ಯಕರ್ಮಾ ವಿಷ್ಣೋಸ್ಸುಪೂರ್ಣಸದನುಗ್ರಹತಃ ಸುನಿತ್ಯಾತ್ ॥**

ಒಳ್ಳೆಯ ಆಟಗಾರ ಎನಿಸಬೇಕಾದರೆ ಯಾವುದಾದರೂ ಒಂದು ಆಟದಲ್ಲಿ ನಿಪುಣನಾಗಿದ್ದರೆ ಸಾಕು. ಅದರಲ್ಲೂ ಆಗಾಗ್ಗೆ ಚೆನ್ನಾಗಿ ಆಡಿದರೆ ಸಾಕು; ಈ ದೃಷ್ಟಿಯಲ್ಲೂ ಭೀಮಸೇನ ದಾಖಲೆಯ ಆಟಗಾರ. ಯಾಕೆಂದರೆ ಎಲ್ಲಾ ವಿಧದ ಆಟಗಳಲ್ಲೂ ಯಾವಾಗಲೂ ಅವನೇ ಅತ್ಯಪೂರ್ವರೀತಿಯಲ್ಲಿ ಮೊದಲಿಗನಾಗಿ ಅಪಾರ ಅಂತರದಲ್ಲಿ ಗೆಲ್ಲುತ್ತಿದ್ದ.

ವರ್ಷದ ಹನ್ನೆರಡು ತಿಂಗಳೂ ತುಂಬಿ ಹರಿಯತಕ್ಕ ನದಿ ಗಂಗಾನದಿ. ಅಂತಹ ನದಿಯನ್ನು ಭೀಮಸೇನ ಅನಾಯಾಸವಾಗಿ ಆ ಕಡೆಯಿಂದ ಈ ಕಡೆಗೆ, ಈ ಕಡೆಯಿಂದ ಆ ಕಡೆಗೆ ಈಜುತ್ತಿದ್ದನು. ಬರೇ ತಾನು ಮಾತ್ರವಲ್ಲ, ನೂರು ಕೌರವರನ್ನೂ ಹೊತ್ತುಕೊಂಡು ಈಜುತ್ತಿದ್ದನು, ನೂರುಮಂದಿಗಳನ್ನೂ ಹೊರಬಲ್ಲ ಸಾಮರ್ಥ್ಯ ಅವನಿಗಿತ್ತು. ಆದರೆ ಅವರೆಲ್ಲ ಒಟ್ಟಾಗಿಯೂ ಭೀಮಸೇನನನ್ನು

ಹೊರುವ ಸಾಮರ್ಥ್ಯವನ್ನು ಹೊಂದಿರಲಿಲ್ಲ. ಅವರನ್ನು ಬೆನ್ನ ಮೇಲೆ ಹೊತ್ತುಕೊಂಡು ಈಜುತ್ತಿದ್ದ ಭೀಮಸೇನ ಮಧ್ಯೆ ಮಧ್ಯೆ ಅವರನ್ನು ಮುಳುಗಿಸಿ ಮತ್ತೆ ಮೇಲೆತ್ತಿ ಹಾಕಿ ನಗೆ ಸೂಸುತ್ತಿದ್ದ. ಆ ದುಷ್ಟರಲ್ಲಿ ಭೀಮಸೇನನ ಯಾವ ಸವಾಲಿಗೂ ಉತ್ತರವಿರುತ್ತಿರಲಿಲ್ಲ.

## ಭೀಮಸೇನನಿಗೇ ಫಲಪ್ರಾಪ್ತಿ

ಒಮ್ಮೆ ದುರ್ಯೋಧನಾದಿಗಳೆಲ್ಲ ದೊಡ್ಡ ಹಣ್ಣಿನಮರವನ್ನು ಹತ್ತಿ ಮರ ಹತ್ತಿ ಅಲ್ಲಿಯ ಹಣ್ಣುಗಳನ್ನೆಲ್ಲ ತಾವೇ ತಿಂದುಬಿಡಬೇಕು; ಭೀಮಸೇನನಿಗೆ ದೊರಕದಂತೆ ಮಾಡಬೇಕೆಂಬ ಕುತಂತ್ರದಲ್ಲಿ ತೊಡಗುವರು. ಮರವನ್ನು ಏರಿದ ಮೇಲೆ ಅವರು ಇನ್ನೇನು ಹಣ್ಣುಗಳನ್ನು ತಿನ್ನತೊಡಗಬೇಕೆಂದಾಗ ಅಲ್ಲಿಗೆ ವೇಗವಾಗಿ ಧಾವಿಸಿದ ಭೀಮಸೇನ ಆ ಮರವನ್ನು ತನ್ನ ಪಾದದಿಂದ ಒದೆಯುವನು. ಇದರಿಂದ ಮರದ ಎಲ್ಲಾ ಹಣ್ಣುಗಳು ಉದುರುವುವು. ಹಣ್ಣುಗಳಷ್ಟೇ ಅಲ್ಲದೆ ಹಣ್ಣುಕೀಳಲು ತೊಡಗಿದ್ದ ಕೌರವರೆಲ್ಲರೂ ಕೆಳಕ್ಕೆ ಬೀಳುವರು. ಅವರನ್ನು ಆಚೆ ಸರಿಸಿ ಭೀಮಸೇನನೇ ಆ ಹಣ್ಣುಗಳನ್ನೆಲ್ಲಾ ತಿನ್ನುವನು. ಭೀಮಸೇನನಿಗೆ ಹಣ್ಣೇ ಸಿಗದಂತೆ ಮಾಡಬೇಕೆಂದು ಹೊರಟವರು ತಾವೇ ಹಣ್ಣಿನಿಂದ ವಂಚಿತರಾದರು.

ಮರ ಹತ್ತಿದ ಕೌರವರಿಗೆ ಫಲ ಸಿಗಲಿಲ್ಲ – ಪಾದದಿಂದ ಮರವನ್ನು ಒದ್ದ ಭೀಮಸೇನ ಫಲ ಹೊಂದಿದ – ಎಂಬ ಈ ಕಥಾ ಭಾಗ ಆಧ್ಯಾತ್ಮಿಕ ಸಂದೇಶವನ್ನು ನೀಡುತ್ತಿದೆ. **'ಏವಮಾಧ್ಯಾತ್ಮನಿಷ್ಠಂ ಹಿ ಭಾರತಂ ಸರ್ವಮುಚ್ಯತೇ'** ಎಂದು ಶ್ರೀಮದಾಚಾರ್ಯರು ಸಂದೇಶಿಸಿರುವಂತೆ ಮಹಾಭಾರತದ ಪ್ರತಿಯೊಂದು ಭಾಗವೂ ಆಧ್ಯಾತ್ಮಿಕಾರ್ಥವನ್ನು ಹೊರಹೊಮ್ಮಿಸುತ್ತಿದೆ ತಾನೇ ?

**'ನಿಗಮಕಲ್ಪತರೋರ್ಗಲಿತಂ ಫಲಂ..'** ಎಂದು ಭಾಗವತದಲ್ಲಿ ತಿಳಿಸಿರುವಂತೆ ವೇದ ಮುಂತಾದ ಶಾಸ್ತ್ರವೇ ವೃಕ್ಷ; ಧರ್ಮ, ಅರ್ಥ, ಕಾಮ, ಹಾಗು ಮೋಕ್ಷ ಈ ನಾಲ್ಕು ಪುರುಷಾರ್ಥಗಳು ಅದರ ಫಲಗಳು. ಆದರೆ ಆ ಫಲಗಳು ಶಾಸ್ತ್ರಪ್ರತಿಪಾದ್ಯ ಭಗವಂತನಿಂದಲೇ ದೊರಕಬಲ್ಲವು. **'ಫಲಮತ ಉಪಪತ್ತೇಃ'** ಎಂಬ ಬ್ರಹ್ಮಸೂತ್ರ ಇದನ್ನೇ ಸಿದ್ಧಾಂತಿಸಿದೆ. ಮರಹತ್ತಿ ಅದರ ಹಣ್ಣಿಗೆ ಕೈ ಹಾಕುವುದೆಂದರೆ ಪೂರ್ವಮೀಮಾಂಸಕರಂತೆ ವೇದಪ್ರತಿಪಾದ್ಯ ಭಗವಂತನನ್ನು ನಂಬದೆ, ವೇದದಿಂದ ಸ್ವರ್ಗಾದಿಫಲಗಳನ್ನು ಕೇವಲ ಕರ್ಮದಿಂದಲೇ ಪಡೆದುಕೊಳ್ಳಲು ಯತ್ನಿಸುವುದು. ಇದು ಸರಿಯಾದ ಮಾರ್ಗವಲ್ಲ. ಭೀಮಸೇನ ಮರದ ಬುಡವನ್ನು ಪಾದದಿಂದ ಒದ್ದ. **'ಉತ್ತಮಾನಾಂ ಸ್ವರೂಪಂ ತು ಪಾದಶಬ್ದೇನ ಭಣ್ಯತೇ'** –

ಎಂದಿರುವುದರಿಂದ ಪಾದ ಎಂದರೆ ಸ್ವರೂಪ ಯೋಗ್ಯತೆ ಎಂದರ್ಥ. ಶಾಸ್ತ್ರದ ಮೂಲಭೂತನಾದ ಪರಮಾತ್ಮನೇ ಮರದ ಬುಡ. ಅಂತಹ ಪರಮಾತ್ಮನನ್ನು ಸ್ವರೂಪಯೋಗ್ಯತೆಯಿಂದ ಶಾಸ್ತ್ರಗಳ ಮೂಲಕ ಸಂಪರ್ಕಿಸುವುದು ಎಂದರ್ಥ. ಇದರಿಂದಾಗಿ ಪ್ರಸನ್ನನಾದ ಭಗವಂತನು ತಾನೇ ಸಾಧಕನಿಗೆ ಬೇಕಾದ ಫಲಗಳನ್ನು ಒದಗಿಸುವನು. ಅತಿಥಿಯಾಗಿ ಹೋದವನಿಗೆ ಬೇಡ ಎಂದರೂ ಆತಿಥೇಯ ಒತ್ತಾಯ ಮಾಡಿ ಆತಿಥ್ಯ ನೀಡುವಂತೆ ಎಂದು ತಿಳಿಯಬೇಕು.ಶ

**'ಊರ್ಧ್ವಮೂಲಮಧಃಶಾಖಂ...'** ಎಂದು ಭಗವದ್ಗೀತೆ ತಿಳಿಸುತ್ತಿರುವಂತೆ ಮರದ ಬುಡವೆಂದರೆ ಊರ್ಧ್ವ ಎನಿಸುವ ಭಗವಂತ. ಭೃಗುಋಷಿಗಳೂ ಭಗವಂತನಿಗೆ ಪಾದದಿಂದ ಒದೆದಿದ್ದಾರೆ; ಕ್ರೋಧದಿಂದ ಅವರು ಹಾಗೆ ಮಾಡಿದ್ದರಿಂದ ಅದು ಅನರ್ಥಕ್ಕೆ ಕಾರಣವಾಯಿತು. ಆದರೆ ಭೀಮಸೇನ ಒಳ್ಳೆಯ ಅನುಸಂಧಾನದಿಂದ ಮರದ ಬುಡಕ್ಕೆ ಒದೆದಿದ್ದಾನೆ. ಅವನ ಪಾಲಿಗೆ ಅದು ಪಾಪ ಎನಿಸಿಲ್ಲ ಅಷ್ಟೇ ಅಲ್ಲ; ಫಲಪ್ರಾಪಕವೂ ಆಗಿತು. ದುರ್ಯೋಧನಾದಿಗಳು ಆಗ ಮಾತ್ರವಲ್ಲ ಜೀವನವಿಡೀ ಸಕಲಫಲಗಳಿಂದ ವಂಚಿತರಾದರು; ಭೀಮಸೇನ ಆಗ ಮಾತ್ರವಲ್ಲ; ಜೀವನವಿಡೀ ಸಕಲಫಲಗಳನ್ನು ಪಡೆಯುತ್ತಲೇ ಇದ್ದನು.

## ಭೀಮವಧೆಗೆ ಕೌರವರ ಪಿತೂರಿ

ಭೀಮಸೇನನನ್ನು ತೇಜೋವಧೆಮಾಡಿ ಹಿಮ್ಮೆಟ್ಟಿಸಲು ಸಾಧ್ಯವಿಲ್ಲ ಎಂದಾದಾಗ ದೈಹಿಕವಾಗಿಯೇ ಮುಗಿಸಿಬಿಡಬೇಕೆಂದು ದುರ್ಯೋಧನಾದಿಗಳು ಸಂಚು ಹೂಡುವರು. ಭೀಮಸೇನನನ್ನು ಮೋಸದಿಂದ ಕೊಂದುಹಾಕಬೇಕು. ಅರ್ಜುನನನ್ನು ಯುದ್ಧದಿಂದ ಕೊಲ್ಲಬೇಕು, ಯುಧಿಷ್ಠಿರ, ನಕುಲ ಹಾಗೂ ಸಹದೇವರನ್ನು– ಕಾರಾಗೃಹದಲ್ಲಿ ಬಂಧಿಸಿಡಬೇಕು– ಎಂಬುದು ಅವರ ಕುತಂತ್ರ. ಕಳ್ಳ ಬಂದವನೇ ಮೊದಲು ದೀಪವನ್ನು ಆರಿಸುತ್ತಾನೆ. ಬೆಳಕು ಹೋದಾಗಷ್ಟೇ ಅವನಿಗೆ ತನ್ನ ಕೆಲಸವನ್ನು ನಡೆಸಲು ಅನುಕೂಲವಾಗುವುದು. ಭೀಮಸೇನ ಜ್ಞಾನಕ್ಕೆ ಸಂಕೇತ. ಆದುದರಿಂದ ಅಂತಹ ಭೀಮಸೇನನನ್ನು ಕೊಲ್ಲುವುದೆಂದರೆ ಜ್ಞಾನವನ್ನು ದೂರಮಾಡುವುದೆಂದರ್ಥ. ಅಂತಹ ಜ್ಞಾನಕ್ಕೆ ಸಾಧನವಾದುದು, ಶ್ರವಣ – ಮನನ – ನಿದಿಧ್ಯಾಸನ. ಅರ್ಜುನನು ಇವುಗಳನ್ನು ಸಂಕೇತಿಸುತ್ತಾನೆ. ಅಂತಹ ಅರ್ಜುನನನ್ನು ಕೊಂದುಹಾಕಬೇಕೆಂದರೆ ಜ್ಞಾನಸಾಧನವನ್ನು ಇಲ್ಲದಂತೆ ಮಾಡಬೇಕೆಂದರ್ಥ. ಯುಧಿಷ್ಠಿರ ಧರ್ಮಕ್ಕೂ; ನಕುಲ, ಸಹದೇವರು ಶೀಲ ವಿನಯಗಳಿಗೂ ಸಂಕೇತ. ಧರ್ಮ, ಶೀಲ, ವಿನಯಗಳಿಗೆ ಅವಕಾಶವೇ ಇಲ್ಲ ಎಂದು

ಮಾಡಿಬಿಟ್ಟರೆ ಪ್ರಜೆಗಳೆಲ್ಲ ಆಕ್ರೋಶ ತಾಳುವ ಸಂಭವವಿದೆ. ಅದಕ್ಕಾಗಿ ಅವೆಲ್ಲ ಇರಬೇಕು. ಆದರೆ ತನ್ನ ಹತೋಟಿಯಲ್ಲಿಯೇ ಇದ್ದು ತಾನು ಹೇಳಿದ್ದೇ ಧರ್ಮ, ತಾನು ತೋರಿಸಿದ್ದೇ ಶೀಲ, ಅದೇ ವಿನಯ – ಹೀಗೆ ಇರಬೇಕು. ಯುಧಿಷ್ಠಿರ, ನಕುಲ, ಸಹದೇವರನ್ನು ಕೊಲ್ಲಬಾರದು; ಕಾರಾಗೃಹದಲ್ಲಿಡಬೇಕು – ಎಂದು ಕುತಂತ್ರ ಹೂಡಿದ್ದ ದುರ್ಯೋಧನ ಸಂಕೇತಿಸುವ ದೌರ್ಜನ್ಯ ಈ ಬಗೆಯದ್ದು.

## ಭೀಮನ ಕಾಲಕೂಟಪಾನ

ಹಿಂದೆ ತಮಗೆ ಆಗದ ರಾಜರನ್ನು, ವಿದ್ವಾಂಸರನ್ನು ವಿಷ ಹಾಕಿ ಕೊಲ್ಲುವ ಕ್ರಮ ಇತ್ತು; ಈಗಲೂ ಅಲ್ಲಲ್ಲಿ ಇರುವಂತೆ. ಭೀಮಸೇನನನ್ನೂ ಹಾಗೆ ಕೊಲ್ಲಬೇಕೆಂದು ದುರ್ಯೋಧನಾದಿಗಳು ಪಿತೂರಿ ನಡೆಸುವರು. ಕಂಸ ಕೃಷ್ಣನನ್ನು ಪೂತನೆಯ ವಿಷದ ಮೂಲಕ ಕೊಲ್ಲಲು ಹೇಗೆ ಕುತಂತ್ರ ಹೂಡಿದ್ದನೋ ಹಾಗೆ. ಸಾಮಾನ್ಯವಾಗಿ ವಿಷ ಹಾಕುವವರು ಯಾವುದೇ ಒಂದು ಪದಾರ್ಥದಲ್ಲಷ್ಟೇ ವಿಷ ಹಾಕುವರು. ಆದರೆ ಭೀಮಸೇನನಿಗೆ **'ಅಖಿಲಭಕ್ಷ್ಯಭೋಜ್ಯೇ'** ಎಂದಿರುವಂತೆ ಪ್ರತಿಯೊಂದು ಭಕ್ಷ್ಯದಲ್ಲೂ ಭೋಜ್ಯದಲ್ಲೂ ವಿಷ ಹಾಕಿದ್ದರು, ಅದೂ ಹಾಕಿದ್ದು ಸಾಮಾನ್ಯ ವಿಷವಲ್ಲ; ಕಾಲಕೂಟವಿಷವನ್ನೇ; ಯಾವ ವಿಷದ ಪಾನದಿಂದಾಗಿ ರುದ್ರದೇವರು **'ನೀಲಕಂಠ'** ಎನಿಸಬೇಕಾಯಿತೋ ಅಂತಹ ಭಯಂಕರ ವಿಷವನ್ನು ಶುಕ್ರಾಚಾರ್ಯರ ಮೂಲಕ ಪಾತಾಲಲೋಕದಿಂದ ತರಿಸಿ, ಅದರ ಮೂಲಕ ಭೀಮಸೇನನ ಹತ್ಯೆಯ ಸಂಚು ನಡೆದಿತ್ತು. ಭೀಮಸೇನನನ್ನು ಸುಲಭವಾಗಿ ಕೊಲ್ಲಲು ಸಾಧ್ಯವೇ ಇಲ್ಲ ಎಂಬ ನಂಬಿಕೆ ಎಷ್ಟು ದೃಢವಾಗಿ ಅವರಲ್ಲಿತ್ತೆಂಬುದು ಇದರಿಂದ ಸ್ಪಷ್ಟವಾಗಬಲ್ಲದು.

ವಿಷ ಕೊಟ್ಟು ಕೊಲ್ಲುವ ಪಿತೂರಿ ನಡೆದಿದೆ ಎಂದು ಭೀಮಸೇನನಿಗೆ 'ಯುಯುತ್ಸು' ಬಂದು ಮೊದಲೇ ತಿಳಿಸುವನು. ಸರ್ವಜ್ಞನಾಗಿದ್ದ ಭೀಮಸೇನನಿಗೆ ಇದು ಸಹಜವಾಗಿಯೇ ತಿಳಿದಿತ್ತು. ಯುಯುತ್ಸು ತನ್ನ ಕರ್ತವ್ಯವನ್ನು ಮಾಡಿದ್ದಾನಷ್ಟೇ. ಮೋಹಿನೀರೂಪದ ಭಗವಂತನು ದೇವತೆಗಳ ಸಾಲಲ್ಲಿ 'ರಾಹು' ಸೇರಿಕೊಂಡಿದ್ದನೆಂದು ತಾನಾಗಿಯೇ ತಿಳಿದಿದ್ದನಾದರೂ, ಸೂರ್ಯಚಂದ್ರರು ಆ ವಿಷಯವನ್ನು ಅವನಿಗೆ ತಿಳಿಸುವ ಮೂಲಕ ತಮ್ಮ ಕರ್ತವ್ಯವನ್ನು ಹೇಗೆ ನಿರ್ವಹಿಸಿದ್ದರೋ ಹಾಗೆ.

ಯುಯುತ್ಸು ದುರ್ಯೋಧನನ ತಮ್ಮ. ಹಾಗಾದರೆ ದುರ್ಯೋಧನನ ತಮ್ಮಂದಿರಲ್ಲಿ ಒಬ್ಬನಾದರೂ ಒಳ್ಳೆಯವನಿದ್ದನಲ್ಲ! ಎಂದು ಸಂತೋಷ

ಪಡುವಂತಿಲ್ಲ. ಯುಯುತ್ಸು ಧೃತರಾಷ್ಟ್ರನಿಂದ ವೈಶ್ಯಸ್ತ್ರೀಯೊಬ್ಬಳಲ್ಲಿ ಜನಿಸಿದವನೇ ಹೊರತು ಗಾಂಧಾರಿಯಲ್ಲಿ ಜನಿಸಿದವನಲ್ಲ. ಗಾಂಧಾರಿಯಲ್ಲಿ ಹುಟ್ಟಿದ ನೂರು ಮಕ್ಕಳೂ ಕೆಟ್ಟವರು. ಕೊನೆಗೆ ಹುಟ್ಟಿದ ದುಃಶ್ಶಲೆಯೂ ಕೆಟ್ಟವಳು, ಅಳಿಯನೂ ಕೆಟ್ಟವನು, ದುರ್ಯೋಧನನ ಪತ್ನಿಯರೂ ಕೆಟ್ಟವರು, ಅವರಲ್ಲಿ ಹುಟ್ಟಿದ ಎಲ್ಲ ಗಂಡುಮಕ್ಕಳೂ ಕೆಟ್ಟವರು. ಹೀಗೆ ಧೃತರಾಷ್ಟ್ರನ ಮೂಲಕ ಗಾಂಧಾರಿಯಲ್ಲಿ ಹರಿದು ಬಂದ ಆ ಕುಟುಂಬ ಸಮಗ್ರವಾಗಿ ಕೆಟ್ಟದಾಗಿತ್ತು. ಒಂದುರೀತಿಯಲ್ಲಿ ಅದು ದಾಖಲೆಯ ದುಷ್ಟಸಂತಾನ.

ಯುಯುತ್ಸು ಧೃತರಾಷ್ಟ್ರನ ಪುತ್ರನಾಗಿದ್ದರೂ, ಗಾಂಧಾರಿಯಲ್ಲಿ ಹುಟ್ಟದವನಾದ್ದರಿಂದ ಆ ಕುಟುಂಬದ ಅಂತರಂಗಸದಸ್ಯನಾಗಿ ಪರಿಗಣಿತನಾಗಿರಲಿಲ್ಲ. ಅವನ ತಾಯಿ ಬೇರೆಯಾಗಿದ್ದಂತೆ ಅವನ ಸ್ವರೂಪಯೋಗ್ಯತೆಯೂ ಅವರೆಲ್ಲರಿಗಿಂತ ಬೇರೆಯೇ ಆಗಿತ್ತು. ಯುಯುತ್ಸು ನಾಸಿಕ್ಯವಾಯು; ಸರ್ವಜ್ಞನಾದ ಭೀಮಸೇನನಿಗೆ ಅವನ ಮೂಲಕ ದುರ್ಯೋಧನಾದಿಗಳ ಕುತಂತ್ರವನ್ನು ತಿಳಿದುಕೊಳ್ಳುವ ಅವಶ್ಯಕತೆ ಇಲ್ಲದಿದ್ದರೂ ಅವನ ಭಕ್ತಿಪೂರ್ವಕವಾದ ಈ ಸೇವೆಯನ್ನು ಪ್ರೀತಿಯಿಂದ ಸ್ವೀಕರಿಸುವನು.

ಭೀಮಸೇನನನ್ನು ಕೊಂದುಹಾಕಬೇಕೆಂದು ಅವನ ಭಕ್ಷ್ಯದಲ್ಲಿ ಬೆರೆಸಿದ ವಿಷ ಕಾಲಕೂಟ ಎಂಬುದು ಮಹಾಭಾರತದಲ್ಲಿಯೇ ಸ್ಪಷ್ಟವಾಗಿದೆ :

**'ತತೋ ದುರ್ಯೋಧನಃ ಪಾಪಸ್ತದ್ಭಕ್ಷ್ಯೇ ಕಾಲಕೂಟಕಮ್। ವಿಷಂ ಪ್ರಕ್ಷೇಪಯಾಮಾಸ...'**

ಭೀಮಸೇನ ಕಾಲಕೂಟವಿಷವನ್ನೂ ತಿಂದು ಜೀರ್ಣಿಸಿಕೊಂಡ ಎಂಬ ಈ ಪ್ರಸಂಗದಿಂದ ಸಮುದ್ರಮಥನದ ಸಮಯದಲ್ಲಿ ಬಂದ ಕಾಲಕೂಟವನ್ನು ಕುಡಿದವನು ವಾಯುದೇವ – ಎಂಬ ಋಗ್ವೇದದ [1]ಕೇಶೀಸೂಕ್ತದ ಮಾತಿಗೆ ಸಮರ್ಥನೆ ದೊರೆತಂತಾಗುವುದು. ಕಾಲಕೂಟವಿಷವನ್ನು ಕುಡಿದವರು ರುದ್ರದೇವರೆಂದು ಸಾಮಾನ್ಯವಾಗಿ ಪ್ರಸಿದ್ಧಿ. ಆದರೆ ಋಗ್ವೇದದ ಕೇಶೀಸೂಕ್ತ ಮುಖ್ಯವಾಗಿ ಕಾಲಕೂಟವಿಷವನ್ನು ವಾಯುದೇವರೇ ಪಾನಮಾಡಿದ್ದು ಎಂದಿದೆ. ಆಧುನಿಕ ವಿಜ್ಞಾನದ ಪರಿಭಾಷೆಯಲ್ಲಿ ಹೇಳುವುದಾದರೆ 'ಡೈಲ್ಯೂಟ್' ಮಾಡಿದ ಆ ಕಾಲಕೂಟದ ಸ್ವಲ್ಪ ಅಂಶವನ್ನಷ್ಟೇ ರುದ್ರದೇವರು ಪಾನಮಾಡಿದರು – ಎಂದು

---

1 ವಾಯುರಸ್ಮಾ ಉಪಾಮಂಥತ್ಪಿನಷ್ಟಿ ಸ್ಮಾ ಕುನನ್ನಮಾ ।
ಕೇಶೀ ವಿಷಸ್ಯ ಪಾತ್ರೇಣ ಯದುದ್ರೇಣಾಪಿಬತ್ಸಹ ॥ – ಋ. X-136-7

ತಿಳಿಸುತ್ತದೆ. ಅಂತಹ ಕಾಲಕೂಟದ ಒಂದಂಶವನ್ನು ಭೀಮಸೇನ ಕುಡಿದು ಜೀರ್ಣಿಸಿಕೊಂಡನೆಂದಾಗ, ಅಂತಹ ಭೀಮಸೇನನ ಮೂಲರೂಪ ವಾಯುದೇವನೇ ಕಾಲಕೂಟ ವಿಷ ಕುಡಿದದ್ದೆಂಬ ಕೇಶೀಸೂಕ್ತದ ನಿರೂಪಣೆಗೆ ಸಾಕ್ಷಿಯನ್ನೊದಗಿಸಿದಂತಾಗುವುದು. ಹೇಗೆ ಶ್ರೀಕೃಷ್ಣ ನವನೀತ ಭಕ್ಷಣ ಮಾಡುತ್ತಿದ್ದಂತೆ, ಪೂತನಿಯ ವಿಷದ ಹಾಲನ್ನು ಕುಡಿದೂ ಜೀರ್ಣಿಸಿಕೊಂಡಿದ್ದನೋ ಹಾಗೆಯೇ ಭೀಮಸೇನ ಬಹುಅನ್ನವನ್ನು ತಿನ್ನುತ್ತಿದ್ದಂತೆ ದುರ್ಯೋಧನಾದಿಗಳು ಕೊಟ್ಟ ಕಾಲಕೂಟವಿಷವನ್ನೂ ತಿಂದು ಜೀರ್ಣಿಸಿಕೊಂಡನೆಂಬುದನ್ನು ಮರೆಯಬಾರದು. ಕಾಲಕೂಟವಿಷವನ್ನು ಹೀಗೆ ಸಂಪೂರ್ಣ ಅರಗಿಸಿಕೊಂಡ ಮತ್ತೊಬ್ಬ ವ್ಯಕ್ತಿಯೇ ಇಲ್ಲ. ಶ್ರೀಕೃಷ್ಣಭೀಮರ ಹೊರತು ವಿಷ ಜೀರ್ಣಿಸಿಕೊಂಡು ಎಂದಿನಂತೆಯೇ ತೇಜಸ್ವಿಗಳಾಗಿ ಬೆಳಗಿದ ಬೇರೆ ಯಾರ ಉಲ್ಲೇಖವೂ ಕಂಡುಬರುವುದಿಲ್ಲ.

ಬಳಿತ್ಥಾಸೂಕ್ತದಲ್ಲಿ 'ಪಿತುಮಾನ್' ಎಂಬ ವಿಶೇಷಣದಿಂದ ಬಹ್ವನ್ನಭೋಕ್ತಾರ ಎಂದೇ ಪ್ರಶಂಸಿಲ್ಪಟ್ಟಿರುವ ಭೀಮಸೇನನ ಈ ಸಾಮರ್ಥ್ಯ ಅವನ ಮುಂದಿನ ಅವತಾರ ಶ್ರೀಮಧ್ವಾಚಾರ್ಯರಿಂದಲೂ ಪ್ರಕಟಿಸಲ್ಪಟ್ಟಿತ್ತು. ಆಗ ಶ್ರೀಮಧ್ವರಿಗೆ ಸುಮಾರು ಹನ್ನೆರಡುವರ್ಷ ಪ್ರಾಯ. ಕಾಸರಗೋಡಿನ ಶ್ರೀವಿಷ್ಣುಮಂಗಲ ದೇವಾಲಯಕ್ಕೆ ತಮ್ಮ ಗುರುಗಳಾದ ಅಚ್ಯುತಪ್ರೇಕ್ಷಾಚಾರ್ಯರ ಜೊತೆಗೆ ಬಂದಿದ್ದರು. ಅವರ ಸಾಮರ್ಥ್ಯವನ್ನು ಪರೀಕ್ಷಿಸಲು ಭೋಜನವಾದ ಬಳಿಕ ಇನ್ನೂರಕ್ಕಿಂತಲೂ ಹೆಚ್ಚು ಬಾಳೇಹಣ್ಣುಗಳನ್ನು ಅವರಿಗೆ ನೀಡಲಾಯಿತು. ಶ್ರೀಮಧ್ವಾಚಾರ್ಯರು ಅಷ್ಟೂ ಬಾಳೇಹಣ್ಣುಗಳನ್ನು ಅನಾಯಾಸವಾಗಿ ತಿಂದರು. ಇದನ್ನು ಕಂಡು ಆಶ್ಚರ್ಯ ಚಕಿತರಾದ ಶ್ರೀಅಚ್ಯುತಪ್ರೇಕ್ಷಾಚಾರ್ಯರಿಗೆ ತಮ್ಮ ತಿನ್ನುವ ಸಾಮರ್ಥ್ಯದ ರಹಸ್ಯವನ್ನು ಶ್ರೀಮಧ್ವಾಚಾರ್ಯರು ಪರಿಚಯಿಸಿ ಕೊಡುವರು:

**ಅಂಗುಷ್ಠಮಾತ್ರಂ ಜಠರೇ ಪ್ರತಿಷ್ಠಿತಂ ಜಾಜ್ವಲ್ಯಮಾನಂ ಮಮ ಜಾತವೇದಸಮ್।**
**ನಿತ್ಯಂ ಹಿತಂ ವಿಶ್ವದಹಂ ಚ ವಿತ್ತ ತಂ ವಿಶ್ವೇಶಚೇತಾ ಇತಿ ಸೋಽಬ್ರವೀತ್ ತದಾ॥**

ಹೆಬ್ಬೆರಳ ಪ್ರಮಾಣದ ಮಹಾವಹ್ನಿಯು ತಮ್ಮ ಉದರದಲ್ಲಿ ಸದಾ ಪ್ರಜ್ವಲಿಸುತ್ತಿರುವುದರಿಂದ ಯಾವುದನ್ನು ಬೇಕಾದರೂ ಎಷ್ಟು ಪ್ರಮಾಣದಲ್ಲಾದರೂ ತಿಂದು ಜೀರ್ಣಿಸಿಕೊಳ್ಳುವ ಶಕ್ತಿ ತಮ್ಮಲ್ಲಿದೆ ಎಂಬುದಾಗಿ.

ಹೀಗೆ ಶ್ರೀಮಧ್ವಾಚಾರ್ಯರು **'ಪಿತುಮಾನ್' – 'ಬಹ್ವನ್ನ ಭೋಕ್ತಾ'** ಎಂದು ವೇದದಲ್ಲಿ ಪ್ರಶಂಸಿಸಲ್ಪಟ್ಟಿರುವ ಭೀಮಸೇನನೇ ತಾನು ಎಂಬುದಾಗಿ ಈ ಮೂಲಕ ತೋರಿಸಿಕೊಟ್ಟಿರುವರು.

ಏನನ್ನು ತಿಂದರೂ ಜೀರ್ಣಿಸಿಕೊಳ್ಳಲು ಬೇಕಾದ 'ವಹ್ನಿ'ಯನ್ನು ಹೊಟ್ಟೆಯಲ್ಲಿ ಹೊಂದಿರುವುದರಿಂದಲೇ ಭೀಮಸೇನ 'ವೃಕೋದರ' ಎಂಬುದಾಗಿ ಪ್ರಸಿದ್ಧನಾಗಿರುವನು. ವೃಕೋದರ ಎಂಬಲ್ಲಿಯ 'ವೃಕ' ಶಬ್ದ ಪಾರಿಭಾಷಿಕ. ಬರೀ ಭಾಷಾಜ್ಞಾನ ಪಡೆದವರು ಅದನ್ನು ಅರ್ಥೈಸಲು ಹೊರಟರೆ ಅಪಾರ್ಥ ಹೊರಹೊಮ್ಮುವ ಅಪಾಯ ಇದೆ. 'ವೃಕ' ಎಂದರೆ ತೋಳ ಎಂಬ ಅರ್ಥದಲ್ಲಿ ಭೀಮಸೇನ ತೋಳನಂತೆ ಹೊಟ್ಟೆಬಾಕ ಎಂಬರ್ಥದಲ್ಲಿ 'ವೃಕೋದರ' ಎನಿಸಿದ್ದಾನೆ – ಎಂದು ಅನೇಕ ಜನ ಅಪಾರ್ಥಮಾಡಿದ್ದಾರೆ. ಅವನ ಪ್ರಶಂಸಾರೂಪದಲ್ಲಿರುವ 'ವೃಕೋದರ' ಹೆಸರನ್ನು ಅವನ ದೂಷಣಪರವಾಗಿ ಅರ್ಥೈಸಿದ್ದಾರೆ. ಪಾರಿಭಾಷಿಕಶಬ್ದಗಳನ್ನೊಳಗೊಂಡ ವಾಕ್ಯಗಳನ್ನು ಅನುವಾದಿಸಬೇಕಾದರೆ ಭಾಷಾಜ್ಞಾನದ ಜೊತೆಗೆ ಭಾವಜ್ಞಾನವೂ ಇರಬೇಕು. ವೃಕೋದರನಾಮದ ಪಾರಿಭಾಷಿಕ ವಿವರಣೆ ಮತ್ಸ್ಯಪುರಾಣ ನೀಡಿದೆ:

**ವೃಕೋನಾಮ ಮಹಾವಹ್ನಿರುದರೇ ಯಸ್ಯ ಪ್ರತಿಷ್ಠಿತಃ ।**

ಶ್ರೀಮಧ್ವಾಚಾರ್ಯರು ತಿಳಿಸಿದಂತೆ ಹೊಟ್ಟೆಯಲ್ಲಿ ಯಾವಾಗಲೂ ಉರಿಯುತ್ತಿರುವ ಹೆಬ್ಬೆರಳು ಗಾತ್ರದ ಅಗ್ನಿ 'ವೃಕ' ಎನ್ನಿಸಿದೆ. ಅಂತಹ ಅಗ್ನಿಯನ್ನು ಹೊಟ್ಟೆಯಲ್ಲಿ ಹೊಂದಿರುವುದರಿಂದಲೇ ಭೀಮಸೇನ ವೃಕೋದರ. ಆದ್ದರಿಂದ ಭೀಮಸೇನನ ವೃಕೋದರ ಎಂಬ ಬಿರುದು ಏನನ್ನು ಬೇಕಾದರೂ ಜೀರ್ಣಿಸಿಕೊಳ್ಳಬಲ್ಲ ಅವನ ಸಾಮರ್ಥ್ಯವನ್ನು ಸಾರುವಂತಹುದ್ದೇ ಹೊರತು ಅವನ ಹೊಟ್ಟೆಬಾಕತನವನ್ನು ಹೇಳುವಂತಹುದಲ್ಲ.

ಭೀಮಸೇನ ಕಾಲಕೂಟ ಮಿಶ್ರಿತ ಭಕ್ಷ್ಯಭೋಜ್ಯಗಳನ್ನು ತಿಂದೂ ಏನೂ ವಿಕಾರವಿಲ್ಲದೆ ಮಲಗಿದ್ದಾನೆ ಎಂದಾಗ ದುರ್ಯೋಧನಾದಿಗಳು ಸರಪಳಿಗಳಿಂದ ಅವನ ಕೈಕಾಲುಗಳನ್ನು ಕಟ್ಟಿ ಗಂಗಾನದಿಯ **'ಪ್ರಮಾಣಕೋಟಿ'** ಎಂಬ ಮಡುವಿನಲ್ಲಿ ಅವನನ್ನು ಎಸೆಯುವರು. ಪ್ರಮಾಣಕೋಟಿಯು ಬಹುಯೋಜನ ಆಳದ ಮಡು. ಅಂತಹ ಮಡುವಿಗೆ ಬಿದ್ದರೂ ಭೀಮಸೇನ ಮೈಕೊಡವಿಕೊಂಡು ಅನಾಯಾಸವಾಗಿ ಆ ಎಲ್ಲ ಸರಪಳಿಗಳು ಹರಿದು ಹೋಗುವಂತೆ ಮಾಡುವನು: –

**'ಭೀಮೋ ವಿಜೃಂಭಣತ ಏವ ವಿವೃಜ್ಯ ಪಾಶಾನ್'**

## ಮಹಾನಾಗಗಳನ್ನು ಮರ್ದಿಸಿದ ಮಹಾಪುರುಷ

ಆ ಕುತಂತ್ರದಿಂದಲೂ ಪಾರಾಗಿ ಬಂದ ಭೀಮಸೇನನನ್ನು ಕೊಲ್ಲಲು ದುರ್ಯೋಧನಾದಿಗಳು ಮತ್ತೊಂದು ಉಪಾಯವನ್ನು ಹುಡುಕುವರು. ಶುಕ್ರಾಚಾರ್ಯರ ಮಂತ್ರದ ಬಲದಿಂದ ಎಂಟು ಅಷ್ಟದಿಕ್ಕುಗಳಲ್ಲಿರುವ ಮಹಾನಾಗಗಳನ್ನೂ ಅವುಗಳ ವಂಶದಲ್ಲಿ ಬಂದ ಸಾವಿರಾರು ಸರ್ಪಗಳನ್ನೂ ದಿಗ್ಬಂಧನ ಮಾಡಿ ತಂದು ಸಾರಥಿಯ ಮೂಲಕ ಭೀಮಸೇನನ ಮೇಲೆ ಪ್ರಯೋಗಿಸುವರು. ತಮ್ಮ ಉಸಿರಿನಿಂದಲೂ, ಕಚ್ಚುವಿಕೆಯಿಂದಲೂ ಸಕಲಲೋಕಗಳನ್ನೂ ಭಸ್ಮವಾಗಿಸಬಲ್ಲ ಭಯಂಕರ ಸರ್ಪಗಳು ಅವು. ಅಂತಹ ಹಾವುಗಳು ಕಚ್ಚಿದರೂ ಭೀಮಸೇನನಿಗೆ ಏನೂ ಆಗಲಿಲ್ಲ. ಭೀಮನನ್ನು ಕಡಿದ ಆ ಹಾವುಗಳ ಹಲ್ಲುಗಳು ಮುರಿದು ಹೋದವು. ಭೀಮಸೇನ ಆ ಎಂಟು ಹಾವುಗಳನ್ನೂ ಬಲು ದೂರಕ್ಕೆ ಎಸೆಯುವನು. ಆ ಹಾವುಗಳ ವಂಶದ ಕ್ಷುಲ್ಲಕ ಹಾವುಗಳನ್ನೆಲ್ಲ ಇರುವೆಗಳಂತೆ ಕೊಂದು ಹಾಕುವನು. ಆ ಹಾವುಗಳ ಪ್ರಯೋಗಕ್ಕಾಗಿ ದುರ್ಯೋಧನಾದಿಗಳಿಂದ ನಿರತನಾಗಿದ್ದ ಸಾರಥಿಯನ್ನು ಮುಂಗೈಯಿಂದಲೇ ಹೊಡೆದು ಕೊಲ್ಲುವನು. ಇಷ್ಟನ್ನೆಲ್ಲ ಭೀಮಸೇನ ಹಾಸಿಗೆಯಿಂದ ಏಳದಯೇ ಸಾಧಿಸಿದ್ದ –**'ಸುಷ್ವಾಪ ಪೂರ್ವವದನುತ್ಥಿತ ಏವ ತಲ್ಪಾತ್'** ಶ್ರೀಕೃಷ್ಣ ಹೇಗೆ ಮಲಗಿದ್ದುಕೊಂಡೇ **'ಅಂಬರಗಂಗಾಚುಂಬಿತಪಾದಃ ಪದತಲವಿದಲಿತ ಗುರುತರಶಕಟಃ'** ಎಂದು ಸ್ತುತನಾಗಿರುವಂತೆ ಶಕಟಾಸುರನನ್ನು ಸಂಹರಿಸಿದನೋ ಹಾಗೆಯೇ ಭೀಮಸೇನ ಮಲಗಿದ್ದುಕೊಂಡೇ ಆ ಎಂಟೂ ಹಾವುಗಳನ್ನು ದೂರ ಎಸೆದು ಉಳಿದ ಸರ್ಪಗಳನ್ನೂ ಸಾರಥಿಯನ್ನೂ ಸಂಹರಿಸಿದನು. ಭೀಮಸೇನನ ಈ ಪರಿಯ ಪರಾಕ್ರಮವನ್ನು ಪರಿಶೀಲಿಸಿದಾಗ 'ಅಹುದಹುದು ಹನುಮಂತ ಅಹುದು ನೀ ಬಲವಂತ' ಎಂಬ ದಾಸರ ಮಾತು ಎಷ್ಟು ಸತ್ಯ ಎಂದು ಮನವರಿಕೆಯಾಗುವುದು.

## ವಾಯುದ್ವೇಷ ಹರಿದ್ವೇಷದಲ್ಲಿ ಪರ್ಯವಸಾನ

ಭೀಮಸೇನನ ಸಂಹಾರಕ್ಕಾಗಿ ಇಷ್ಟೆಲ್ಲ ಪ್ರಯತ್ನಪಟ್ಟರೂ ಯಾವುದೂ ಫಲಿಸಲಿಲ್ಲ ಎಂದಾದಾಗ ದುರ್ಯೋಧನಾದಿಗಳು ಮತ್ತೆ ಸಮಾಲೋಚನೆ ನಡೆಸುವರು. ಅಂದು ಭೀಮನನ್ನು ಮುಗಿಸಲು ಪ್ರಯತ್ನಿಸಿದಂತೆಯೇ ಹಿಂದೆ ಪ್ರಹ್ಲಾದನನ್ನು ಕೊಲ್ಲಲು ಹಿರಣ್ಯಕಶಿಪುವೂ ತುಂಬ ಪ್ರಯತ್ನಪಟ್ಟಿದ್ದ. ಪ್ರಹ್ಲಾದನನ್ನು

ಹಿರಣ್ಯಕಶಿಪುವಿಗೆ ಯಾಕೆ ಕೊಲ್ಲಲಾಗಲಿಲ್ಲ ಎಂದರೆ ನರಸಿಂಹನ ರಕ್ಷಣೆ ಅವನಿಗಿತ್ತು. ಅದೇ ನರಸಿಂಹ ಕೃಷ್ಣನಾಗಿ ಬಂದು ಈಗ ಭೀಮಸೇನನಿಗೆ ರಕ್ಷಣೆ ನೀಡುತ್ತಿದ್ದಾನೆ. ಪ್ರಹ್ಲಾದ ತನ್ನನ್ನು ಕಾಪಾಡಲು ಪ್ರಾರ್ಥಿಸಿದ ಎಂದು ನರಸಿಂಹ ಅವನಿಗೆ ರಕ್ಷಣೆ ನೀಡಿದ. ಭೀಮಸೇನನಾದರೋ ದೇವರನ್ನು ಪ್ರಾರ್ಥಿಸುತ್ತಾನಾದರೂ 'ತನ್ನನ್ನು ರಕ್ಷಿಸು' ಎಂದು ಫಲಾಪೇಕ್ಷೇಯಿಂದ ಕೇಳಿಕೊಳ್ಳುವವನಲ್ಲ. ಆದ್ದರಿಂದ ಪ್ರಹ್ಲಾದನ ಬಲ ಭಗವಂತನ ಪ್ರಾರ್ಥನಾ ವಿಶೇಷದಿಂದ ಬಂದದ್ದಾದರೆ, ಭೀಮನ ಬಲ ಸ್ವಾಭಾವಿಕವಾದುದ್ದು. ಯಾವುದೇ ದೈತ್ಯರ ಆಕ್ರಮಣಕ್ಕೆ ಒಳಗಾಗಲಾರದ ವ್ಯಕ್ತಿತ್ವವನ್ನೊಳಗೊಂಡದ್ದರಿಂದಲೇ ವಾಯುದೇವನನ್ನು **'ಆಖಣಾಶ್ಮಸಮ'** – ಎಂದು ಉಪನಿಷತ್ತು ಹೊಗಳಿದೆ. ವಾಯುದೇವನ ಅಂತಹ ಆಖಣಾಶ್ಮಸಮ ವ್ಯಕ್ತಿತ್ವ ಭೀಮಸೇನನ ಈ ಎಲ್ಲ ಜೀವನ ಘಟನೆಗಳಿಂದ ಸ್ಪಷ್ಟವಾಗಬಲ್ಲದು. ದುರ್ಯೋಧನ ದೈತ್ಯಾಧಮ ಅಂತಹವನಿಗೇ ಭೀಮಸೇನನನ್ನು ಏನೂ ಮಾಡಲು ಆಗಲಿಲ್ಲ ಎಂದ ಮೇಲೆ ಉಳಿದ ಯಾವ ದೈತ್ಯರಿಗೂ ಏನುಮಾಡಲೂ ಸಾಧ್ಯವೇ ಇಲ್ಲ ಎಂಬುದು ಸ್ಪಷ್ಟ. ಭೀಮಸೇನನ ಈ ಮಹಿಮೆ ಭಗವಂತನಿಂದ ಅನುಗೃಹೀತವಾದದ್ದೇ;

> **ತಿಷ್ಠನ್ನೇವಾವತಾರೇಷ್ವರಿಭಿರಪಘೃಣಂ ಹಿಂಸಿತೋ ನಿರ್ವಿಕಾರಃ**
> **ಸರ್ವಜ್ಞಃ ಸರ್ವಶಕ್ತಿಃ ಸಕಲಗುಣಗಣಾಪೂರ್ಣರೂಪಪ್ರಗಲ್ಭಃ।**
> **ಸ್ವಚ್ಛಃ ಸ್ವಚ್ಛಂದಮೃತ್ಯುಃ ಸುಖಯಸಿ ಸುಜನಂ ದೇವ ಕಿಂ ಚಿತ್ರಮತ್ರ**
> **ತ್ರಾತಾ ಯಸ್ಯ ತ್ರಿಧಾಮಾ ಜಗದುತ ವಶಗಂ ಕಿಂಕರಾಃ ಶಂಕರಾದ್ಯಾಃ ॥**

–ಎಂಬುದಾಗಿ ಶ್ರೀತ್ರಿವಿಕ್ರಮಪಂಡಿತಾಚಾರ್ಯರು 'ತ್ರಿಧಾಮಾ' ಎನಿಸಿರುವ ಭಗವಂತನ ಸಂರಕ್ಷಣೆ ಸದಾ ನಿಮ್ಮ ಮೇಲೆ ಇರುವುದರಿಂದ ಶತ್ರುಗಳ ಆಕ್ರಮಣಕ್ಕೆ ನೀವು ಒಳಗಾಗದಿರುವುದು ಆಶ್ಚರ್ಯವಲ್ಲ ಎಂದು ಉದ್ಗಾರ ಎತ್ತಿದ್ದಾರೆ. ಆದರೆ ಈ ಸಂರಕ್ಷಣೆ ಪ್ರಹ್ಲಾದ ನೃಸಿಂಹನನ್ನು ಪ್ರಾರ್ಥಿಸಿಕೊಂಡು ಅವನಿಂದ ಪಡೆದುಕೊಂಡ ಸಂರಕ್ಷಣೆಯಂತಲ್ಲ ಎಂಬುದು ವಿಶೇಷ. ಅಲ್ಲದೆ, **'ವಾಯುನಾ ಚ ಸಮಾವಿಷ್ಟ...'** ಎಂದಿರುವಂತೆ ವಾಯುದೇವರ ಆವೇಶಕ್ಕೊಳಗಾದುದರಿಂದಲೇ ಪ್ರಹ್ಲಾದನಿಗೆ ಅಂತಹ ಸಾಮರ್ಥ್ಯ ಬಂದಿತ್ತು. ಭೀಮಸೇನನಾದರೋ 'ಸ ವಾಯುರೇವಾಭವದತ್ರ ಭೀಮನಾಮಾ...' ಎಂದಿರುವಂತೆ ಸಾಕ್ಷಾತ್ ವಾಯುದೇವನದ್ದೇ ಮತ್ತೊಂದು ರೂಪ. ಹೀಗೆ ಮೇಲ್ನೋಟಕ್ಕೆ ಪ್ರಹ್ಲಾದ ಮತ್ತು ಭೀಮಸೇನ ಇವರ ಈ ನಿಟ್ಟಿನ ಸಾಮರ್ಥ್ಯ ಒಂದೇ ಬಗೆಯಾಗಿ ಕಾಣುವುದಾದರೂ ನಿಜಕ್ಕೂ ಭೀಮನ ಸಾಮರ್ಥ್ಯ ಪ್ರಹ್ಲಾದನ ಸಾಮರ್ಥ್ಯಕ್ಕಿಂತ ತುಂಬ ಎತ್ತರದಲ್ಲಿದೆ. ಅದನ್ನು ಈ ಸಂದರ್ಭದಲ್ಲಿ ಶ್ರೀಮದಾಚಾರ್ಯರು

ವಿಮರ್ಶೆಮಾಡಿ ತೋರಿಸಿರುವರು. ದುರ್ಯೋಧನಾದಿಗಳು ಭೀಮನ ಬಲ ಪ್ರಹ್ಲಾದನ ಬಲಕ್ಕಿಂತಲೂ ವಿಶಿಷ್ಟವಾದುದು ಎಂದು ಗುರುತಿಸಿದರು. ಹೀಗೆ ದುರ್ಯೋಧನ ಬಾಲ್ಯದಿಂದಲೂ ಭೀಮಸೇನನ ಬಲವನ್ನು ಚೆನ್ನಾಗಿ ಪರಿಚಯಿಸಿಕೊಂಡು ಬಂದಿರುವುದರಿಂದಲೇ ಭಗವದ್ಗೀತೆಯ ಮೊದಲ ಅಧ್ಯಾಯದಲ್ಲಿ ಉಲ್ಲೇಖಗೊಂಡಂತೆ ಮಹಾಭಾರತಯುದ್ಧದ ಪ್ರಾರಂಭದಲ್ಲಿ **'ಪರ್ಯಾಪ್ತಂ ತ್ವಿದಮೇತೇಷಾಂ ಬಲಂ ಭೀಮಾಭಿರಕ್ಷಿತಮ್'** – ಎಂಬುದಾಗಿ ಉದ್ಗಾರ ತೆಗೆಯುತ್ತಾನೆ. 'ಪರ್ಯಾಪ್ತಂ' ಎಂದರೆ ಸಮರ್ಥಂ ಎಂದು ಅಭಿಪ್ರಾಯ. ದುರ್ಯೋಧನನಿಗೆ ಭೀಮನ ಸಾಮರ್ಥ್ಯದ ಪರಿಚಯ ಚೆನ್ನಾಗಿ ಇದೆ ಎಂಬುದನ್ನು ಪರಿಶೀಲಿಸದವರಷ್ಟೇ ದುರ್ಯೋಧನನ ಈ ಮಾತಿನ **'ಪರ್ಯಾಪ್ತಂ'** ಎಂಬುದಕ್ಕೆ 'ಪರಿಮಿತ' ಎಂದು ಅರ್ಥೈಸಿ, ಅದು ಪಾಂಡವರ ಸೇನೆಯನ್ನು ತೆಗಳಲು ಹೊರಟ ಮಾತು ಎಂದು ತಪ್ಪಾಗಿ ವ್ಯಾಖ್ಯಾನಿಸಿರುವರು.

ಭೀಮನ ಬಲವನ್ನು ಹೀಗೆ ಅನುಭವಾರೂಢಮಾಡಿಕೊಂಡ ದುರ್ಯೋಧನಾದಿಗಳು 'ಹಾಗಾದರೆ ಭೀಮನ ವಿರುದ್ಧವಾಗಿ ನಮಗೆ ನಡೆದುಕೊಳ್ಳಲಾಗುವುದಿಲ್ಲ ಎಂದಮೇಲೆ ಅವನಿಗೆ ಶರಣಾಗತರಾಗೋಣ, ಅವನಿಗೆ ವಿನೀತರಾಗಿದ್ದುಕೊಂಡು ಬದುಕೋಣ' ಎಂದು ತೀರ್ಮಾನಿಸಬಹುದಿತ್ತು. ಆದರೆ ಅವರು ಹಾಗೆ ವಿಚಾರ ಮಾಡುವುದೇ ಇಲ್ಲ. ಮೂರ್ಖರು ಎಷ್ಟೇ ಅನರ್ಥಕ್ಕೊಳಗಾದರೂ ಅವರು ವಿವೇಕದ ಮಾರ್ಗವನ್ನು ಅನುಸರಿಸುವುದೇ ಇಲ್ಲ; ಮತ್ತೆ ಮತ್ತೆ ಮೂರ್ಖತನದ ಕಡೆಗೇ ವಾಲುತ್ತಿರುತ್ತಾರೆ.

ಭೀಮ ಶ್ರೀಕೃಷ್ಣನ ಆಶ್ರಯದಿಂದಾಗಿ ಇಷ್ಟು ಬಲಿಷ್ಠನಾಗಿ ಮೆರೆಯುತ್ತಿದ್ದಾನೆಂದರೆ ಹಾಗಾದರೆ ಕೃಷ್ಣಸಹಿತವಾಗಿಯೇ ಇವನನ್ನು ಕೊಲ್ಲಬೇಕು – ಎಂದು ತೀರ್ಮಾನಿಸುವರು. ಎಂದರೆ ವಾಯುದ್ವೇಷ ಹೀಗೆ ಹರಿದ್ವೇಷದಲ್ಲಿ ಪರ್ಯಾವಸಾನಗೊಳ್ಳುವುದು. **'ಮುಕುಂದಭಕ್ತ್ಯೈ ಗುರುಭಕ್ತಿಜಾಯೈ...'** ಎಂದಿರುವಂತೆ ಗುರುಗಳಲ್ಲಿ, ವಾಯುದೇವರಲ್ಲಿ ಮಾಡಿದ ಭಕ್ತಿ ಹೇಗೆ ಶ್ರೀಹರಿಭಕ್ತಿಯಲ್ಲಿ ಪರ್ಯಾವಸಾನಗೊಳ್ಳುವುದೋ ಹಾಗೆ.

## ಭೀಮಸೇನನಿಂದ ರಾಜ್ಯವಿಸ್ತಾರ

ದುರ್ಯೋಧನಾದಿಗಳು ಭೀಮನನ್ನು ಕೊಲ್ಲುವ ಯತ್ನವನ್ನು ಅನಂತರವೂ ಮುಂದುವರೆಸುತ್ತಲೇ ಹೋಗುವರು. ಭೀಮಸೇನ ಅರ್ಜುನನ ಜೊತೆಗೆ

ದಿಗ್ವಿಜಯದಲ್ಲಿ ತೊಡಗುವನು. ಪಾಂಡುರಾಜನ ಕಾಲದಲ್ಲಿ ಕುರುರಾಜ್ಯ ಸಾಕಷ್ಟು ವಿಸ್ತಾರವಾಗಿತ್ತು. ನಾಲ್ಕೂದಿಕ್ಕುಗಳಲ್ಲೂ ದಿಗ್ವಿಜಯ ನಡೆಸಿದ ಭೀಮಸೇನ ಇನ್ನಷ್ಟು ಕುರುರಾಜ್ಯವನ್ನು ವಿಸ್ತಾರಗೊಳಿಸುವನು. ಈ ವಿಷಯ ಮೂಲಮಹಾಭಾರತದಲ್ಲಿ ಇದೆ. ಶ್ರೀಮದಾಚಾರ್ಯರೂ ತಮ್ಮ ಮಹಾಭಾರತತಾತ್ಪರ್ಯನಿರ್ಣಯದಲ್ಲಿ ಸ್ಪಷ್ಟಪಡಿಸಿದ್ದಾರೆ. ಆದರೆ ಹೆಚ್ಚಿನವರು ಇದನ್ನು ಗಮನಿಸಿಯೇ ಇಲ್ಲ.

ಆದರೆ ಭೀಮಸೇನ ಇನ್ನೂ ಇಪ್ಪತ್ತು ವರ್ಷಗಳ ಅಂಚಿನಲ್ಲಿರುವಾಗಲೇ ರಾಜ್ಯ ವಿಸ್ತಾರವನ್ನು ನಡೆಸಿದ್ದನೆಂಬ ಸಂಗತಿ ತುಂಬ ಗಮನಾರ್ಹ. ಯಾಕೆಂದರೆ ದುರ್ಯೋಧನಾದಿಗಳು ಯಾವಾಗಲೂ ರಾಜ್ಯಕ್ಕಾಗಿ ಕಾದಾಡಿದವರೇ ಹೊರತು ರಾಜ್ಯವಿಸ್ತಾರ ನಡೆಸಿದವರಲ್ಲ. ಭೀಮಾದಿಗಳು ಬಾಲ್ಯದಿಂದಲೂ ಈ ಕೆಲಸವನ್ನು ಮಾಡುತ್ತಲೇ ಬಂದವರು. ಹೀಗಿದ್ದರೂ ದುರ್ಯೋಧನಾದಿಗಳು ತಮಗಷ್ಟೇ ರಾಜ್ಯದಲ್ಲಿ ಅಧಿಕಾರ ಪಾಂಡವರಿಗೆ ಏನೂ ಅಧಿಕಾರ ಇಲ್ಲ– ಎಂದು ಹೆಜ್ಜೆ ಹೆಜ್ಜೆಗೆ ಹೇಳುತ್ತ ಬಂದಿರುವುದು ಎಷ್ಟು ಅರ್ಥಹೀನ ಎಂಬುದು ಇದರಿಂದ ಸ್ಪಷ್ಟವಾಗುತ್ತದೆ.

## ಮಧುರೆಯಲ್ಲಿ ಗದಾವಿದ್ಯಾಭ್ಯಾಸ

ಒಮ್ಮೆ ಅಕ್ರೂರ ಹಸ್ತಿನಾಪುರಕ್ಕೆ ಬಂದವನು ಶ್ರೀಕೃಷ್ಣನ ಆದೇಶದಂತೆ ಭೀಮಸೇನ, ಅರ್ಜುನ ಹಾಗೂ ಸಹದೇವರನ್ನು ತನ್ನ ಜೊತೆಗೆ ಮಧುರಾಪಟ್ಟಣಕ್ಕೆ ಕರೆದೊಯ್ಯುವನು. ಅಲ್ಲಿ ಮೂರುವರ್ಷಗಳ ಕಾಲ ಅವರು ವಿದ್ಯಾಭ್ಯಾಸ ನಡೆಸುವರು. ಭೀಮಸೇನ ಬಲರಾಮನಿಂದ ಗದಾವಿದ್ಯಾಭ್ಯಾಸ ಮಾಡುವನು. ಅರ್ಜುನ ಕೃಷ್ಣನಿಂದ ಅಸ್ತ್ರಗಳನ್ನು ಪಡೆಯುವನು. ಸಹದೇವ ಉದ್ಧವನಿಂದ ಎಲ್ಲ ನೀತಿಶಾಸ್ತ್ರಗಳ ಉಪದೇಶ ಹೊಂದುವನು. ಭೀಮಸೇನ ಸಹಜವಾಗಿಯೇ ಎಲ್ಲವನ್ನೂ ಬಲ್ಲವ. ಆದರೆ ದೇವತೆಗಳು ಮನುಷ್ಯರಲ್ಲಿ ಹುಟ್ಟಿದಾಗ ಮನುಷ್ಯರಂತೆಯೇ ನಡೆದುಕೊಳ್ಳಬೇಕು –**'ಪ್ರಾಪ್ತೇ ನರೇಷು ಜನನೇ ನರವತ್ ಪ್ರವೃತ್ತಿಃ'** – ಎಂದು ತೋರಿಸಿಕೊಡುವುದಕ್ಕಾಗಿಯಷ್ಟೇ ಗದಾವಿದ್ಯಾಭ್ಯಾಸ ನಡೆಸಿದಂತೆ ನಡೆದುಕೊಳ್ಳುವನು. ಸರ್ವಜ್ಞನಾದ ಶ್ರೀಕೃಷ್ಣನು ಲೋಕಶಿಕ್ಷಣಕ್ಕಾಗಿ ಸಾಂದೀಪಿನೀ ಆಚಾರ್ಯರಲ್ಲಿ ಅರವತ್ನಾಲ್ಕುದಿನಗಳ ಕಾಲ ಹೇಗೆ ವಿದ್ಯಾಭ್ಯಾಸ ನಡೆಸಿದನೋ ಹಾಗೆ.

## ಭೀಮಸೇನನ ಶುದ್ಧ ಭಾಗವತಧರ್ಮ

ಒಂದು ವೇಳೆ ಶ್ರೀಕೃಷ್ಣನಲ್ಲಿ ಗದಾಯುದ್ಧಾಭ್ಯಾಸದಲ್ಲಿ ತೊಡಗಿದರೆ ಕೃಷ್ಣನ ವಿರುದ್ಧವಾಗಿ ಕೈ ಎತ್ತಬೇಕಾಗುವುದು. ಇದರಿಂದ ಭಾಗವತಧರ್ಮಕ್ಕೆ ಚ್ಯುತಿ ಬಂದಂತಾಗುವುದು. ಯಾಕೆಂದರೆ ಭಾಗವತಧರ್ಮದ ಪ್ರಕಾರ ಯಾವುದೇ ಉದ್ದೇಶದಿಂದಲೂ ಭಗವಂತನಿಗೆ ವಿರುದ್ಧವಾಗಿ ನಡೆದುಕೊಳ್ಳಬಾರದು. ಈ ಧರ್ಮಸೂಕ್ಷ್ಮವನ್ನು ಅರಿತ ಭೀಮಸೇನ ತನ್ನ ಗದಾವಿದ್ಯಾಭ್ಯಾಸವನ್ನು ಶ್ರೀಕೃಷ್ಣನಲ್ಲಿ ನಡೆಸಲಿಲ್ಲ.

ಆದರೆ ಬಲರಾಮನಲ್ಲಿ ತನ್ನ ಗದಾವಿದ್ಯಾಭ್ಯಾಸವನ್ನು ನಡೆಸಬಹುದೆಂದು ತೀರ್ಮಾನಿಸುವನು. ಬಲರಾಮನಲ್ಲಿ ಭಗವಂತನ ಶುಕ್ಲಕೇಶಾವೇಶ ಇರುವುದರಿಂದ ಗುರುಗಳಿಗೆ ಸಲ್ಲಿಸಬೇಕಾದ ಗೌರವವನ್ನೂ ಅವನಿಗೆ ಸಲ್ಲಿಸಬಹುದು. ಯಾವಾಗ ಭಗವಂತನ ಶುಕ್ಲಕೇಶಾವೇಶ ಇರುವುದಿಲ್ಲವೋ ಆಗ ಅವನು ಬರೇ ಶೇಷ ಎನಿಸುತ್ತಿದ್ದು, ಗದಾವಿದ್ಯಾಭ್ಯಾಸಕ್ಕನುಗುಣವಾಗಿ ಅವನ ವಿರುದ್ಧ ಕೈ ಮಾಡುವುದು ಅಪರಾಧ ಎನಿಸುವುದಿಲ್ಲ. ಸರ್ವಜ್ಞನಾದ ಭೀಮಸೇನನಿಗೆ ಯಾವಾಗ ಬಲರಾಮನಲ್ಲಿ ಶುಕ್ಲಕೇಶದ ಆವೇಶವಿರುವುದು, ಯಾವಾಗ ಆ ಆವೇಶ ಇರುವುದಿಲ್ಲ ಎನ್ನುವುದರ ಅರಿವು ಚೆನ್ನಾಗಿ ಇತ್ತು.

ಶುಕ್ಲಕೇಶದ ಆವೇಶವಿಲ್ಲದಾಗ ಬಲರಾಮ ಬರೀ ಶೇಷ. ಅಂದಮೇಲೆ ಭೀಮಸೇನನ ಪುತ್ರನೇ ಆಗುವನು. '**...ಸೂತ್ರಾತ್ ಶ್ರದ್ಧಾ ಸುತಾನಾಪ ಸುರ ಪ್ರವೀರಾನ್ ಶೇಷಂ ಶಿವಂ ಚೇಂದ್ರಂ..**' ಎಂದಿರುವಂತೆ ಶ್ರದ್ಧಾನಾಮಕ ಭಾರತಿಯಲ್ಲಿ ಸೂತ್ರನಾಮಕ ವಾಯುದೇವನಿಂದ ಹುಟ್ಟಿದ ಮಕ್ಕಳಲ್ಲಿ ಶೇಷನೂ ಒಬ್ಬ ತಾನೇ?

ಕೃಷ್ಣ ಭೀಮಸೇನನಿಗೆ ವಿಶೋಕ ಎನ್ನುವವನನ್ನು ಸಾರಥಿಯನ್ನಾಗಿ ನೀಡುವನು. 'ತ್ರಿವಕ್ರೆ'ಯನ್ನು ಅವಕ್ರೆಯನ್ನಾಗಿ ಮಾಡಿದ ಕೃಷ್ಣ ಅವಳಲ್ಲಿ ಪಡೆದ ಮಗನೇ ವಿಶೋಕ. ನಾರದರಲ್ಲಿ ಪಂಚರಾತ್ರವನ್ನು ಕೇಳಿದ ಜ್ಞಾನಿ ವಿಶೋಕ. ವಿಶೋಕನಿಂದ ಭೀಮಸೇನನಿಗೆ ಉಪಯೋಗವಾಗಲೆಂಬ ಉದ್ದೇಶವಲ್ಲ; ಭೀಮಸೇನನ ಅನುಗ್ರಹದಿಂದ ವಿಶೋಕ ಉಳಿದುಕೊಳ್ಳುವಂತಾಗಲಿ – ಎಂಬ ಉದ್ದೇಶದಿಂದ ಕೃಷ್ಣ ವಿಶೋಕನನ್ನು ಭೀಮಸೇನನಿಗೆ ಕೊಟ್ಟದ್ದು. ಮಹಾಭಾರತ ಯುದ್ಧದಲ್ಲಿ ಎಲ್ಲರ ಸಾರಥಿಗಳೂ ಸತ್ತಿದ್ದಾರೆ. ಉಳಿದುಕೊಂಡ ಇಬ್ಬರೇ ಸಾರಥಿಯರು. ಒಬ್ಬ ಪಾರ್ಥಸಾರಥಿ ಶ್ರೀಕೃಷ್ಣನಾದರೆ ಮತ್ತೊಬ್ಬ ಭೀಮಸಾರಥಿ ವಿಶೋಕ. ಶ್ರೀಕೃಷ್ಣ ಕೊಟ್ಟ ಕಾಣಿಕೆ ಎಂಬ ದೃಷ್ಟಿಯಿಂದ ಅವನು ಜಾಗರೂಕತೆಯಿಂದ ಭೀಮನಿಂದ ಸಂರಕ್ಷಿಸಲ್ಪಟ್ಟಿದ್ದ.

## ಶ್ರೀವೇದವ್ಯಾಸರ ಶಿಷ್ಯರು

ಪಾಂಡವರು ಶ್ರೇಷ್ಠರಾಜರಾಗಿದ್ದಂತೆ ಅಪೂರ್ವ ತತ್ತ್ವಜ್ಞಾನಿಗಳೂ ಆಗಿದ್ದರು. ಶ್ರೀವೇದವ್ಯಾಸರಿಂದಲೇ ಅವರು ತತ್ತ್ವಜ್ಞಾನ ಪಡೆದುಕೊಂಡಿದ್ದರು. **'ಸದ್ಧರ್ಮಚಾರಿಣ ಉರುಕ್ರಮಶಿಕ್ಷಿತಾರ್ಥಾ:'**– ಎಂದಿರುವಂತೆ ಉತ್ತಮ ತತ್ತ್ವಜ್ಞಾನಿಗಳಾದುದರಿಂದಲೇ ಅವರು ಸದಾಚಾರಸಂಪನ್ನರೂ ಆಗಿದ್ದರು. ತತ್ತ್ವಜ್ಞಾನದ ಪ್ರಭಾವ ಆಚಾರದಲ್ಲಿ ಕಂಡುಬರುವುದು ಸಹಜ. ಭೀಮಸೇನ ಸಹಜವಾಗಿಯೇ ಪ್ರತಿಭಾಶಾಲಿಯಾಗಿದ್ದರೂ ಶ್ರೀವೇದವ್ಯಾಸರಿಂದ ಶಾಸ್ತ್ರಶ್ರವಣ ಮಾಡಿ ವಿಶೇಷವಾದ ಪ್ರತಿಭೆಯನ್ನು ಹೊಂದಿದ್ದನು. ಭೀಮಸೇನನಾಗಿದ್ದಾಗಲೂ, ಶ್ರೀಮಧ್ವಾಚಾರ್ಯರಾದ ಮೇಲೂ ಶ್ರೀವೇದವ್ಯಾಸರನ್ನು ಗುರುಗಳನ್ನಾಗಿ ಹೊಂದಿರುವುದರಿಂದಲೂ **'ತಮೇವ ಶಾಸ್ತ್ರಪ್ರಭವಂ..'** ಎಂಬ ಅನುವ್ಯಾಖ್ಯಾನದ ಶ್ಲೋಕದಲ್ಲಿ **'ವಿಶೇಷತೋ ಮೇ'** – ಎಂಬ ಮಾತಿನಿಂದ ವಿಶೇಷವಾಗಿ ತನಗೆ ಗುರುಗಳೆಂದು ಉಲ್ಲೇಖಿಸಿರುವರು.

ಭೀಮಸೇನ ಅನಧಿಕೃತವಾಗಿ ಯುವರಾಜನಂತಿದ್ದ. ಯುಧಿಷ್ಠಿರನಿಗೆ ಬೆಂಗಾವಲಾಗಿದ್ದುಕೊಂಡು ಆಡಳಿತದಲ್ಲಿಯೂ ತತ್ತ್ವಜ್ಞಾನವನ್ನು ಜಾರಿಗೊಳಿಸಿದ್ದನು:

**ಸರ್ವಾನಭಾಗವತಶಾಸ್ತ್ರಪಥಾನ್ ವಿಧೂಯ ಮಾರ್ಗಂ ಚಕಾರ ಸ ತು ವೈಷ್ಣವಮೇವ ಶುಭ್ರಮ್।**

– ಅವೈಷ್ಣವಮಾರ್ಗಗಳನ್ನೆಲ್ಲ ತೊಡೆದು ಶುದ್ಧ ವೈಷ್ಣವಮಾರ್ಗವನ್ನು ಸ್ಥಾಪನೆಗೊಳಿಸಿದನು.

## ದ್ರೋಣರಲ್ಲಿ ಅಸ್ತ್ರವಿದ್ಯಾಭ್ಯಾಸ

ದ್ರುಪದ ಎಸಗಿದ ಅವಮಾನಕ್ಕೆ ತಕ್ಕ ಪ್ರತೀಕಾರ ಸಲ್ಲಿಸಬೇಕೆಂದು ತೀರ್ಮಾನಿಸಿದ ದ್ರೋಣರು ಅದಕ್ಕಾಗಿಯೇ ಪಾಂಡವಕೌರವರಿಗೆ ಅಸ್ತ್ರ ವಿದ್ಯೋಪದೇಶದಲ್ಲಿ ತೊಡಗುವರು. ಪ್ರಾರಂಭದಲ್ಲಿ 'ತನ್ನ ಇಷ್ಟವನ್ನು ಸಾಧಿಸುವ ಪ್ರತಿಜ್ಞೆಯನ್ನು ಮಾಡುವ ಶಿಷ್ಯನನ್ನು ಧನ್ವಿಶ್ರೇಷ್ಠನಾಗಿ ಮಾಡುವೆ' ಎಂದು ತಿಳಿಸುವರು. ಯಾರೂ ಮುಂದೆ ಬರುವುದಿಲ್ಲ. ಅಷ್ಟು ಸಮರ್ಥರಾದ ದ್ರೋಣರ ಇಷ್ಟವನ್ನು ಈಡೇರಿಸುವುದು ತಮಗೆ ಸಾಧ್ಯವಾಗದು ಎಂದು ಪ್ರತಿಯೊಬ್ಬರೂ ಹಿಂಜರಿಯುವರು. ಭೀಮಸೇನನ ಪ್ರೇರಣೆಗನುಗುಣವಾಗಿ ಅರ್ಜುನ ಪ್ರತಿಜ್ಞೆ ಮಾಡುವನು. ಸ್ವಾಭಾವಿಕ ಪ್ರತಿಭೆಯಿಂದಲೇ ಎಲ್ಲವನ್ನೂ ಬಲ್ಲವನಾಗಿದ್ದ ಭೀಮಸೇನನಿಗೆ ದ್ರೋಣಾಚಾರ್ಯರಿಂದ ಏನನ್ನೂ ಪಡೆದುಕೊಳ್ಳುವ ಅವಶ್ಯಕತೆ

ಇಲ್ಲದ್ದರಿಂದ ತಾನು ಪ್ರತಿಜ್ಞೆ ಮಾಡಲು ಮುಂದುವರೆಯಲಿಲ್ಲ. ಆದರೆ ಅರ್ಜುನನಿಗೆ ಅದರ ಅವಶ್ಯಕತೆ ಇದೆ ಎಂದು ಅರಿತು ಪ್ರತಿಜ್ಞೆ ಮಾಡಲು ಅವನಿಗೆ ಪ್ರೇರಣೆ ನೀಡುವನು. ಇದು ಗುರುಗಳ ಉತ್ತಮ ಲಕ್ಷಣ. ವ್ಯಕ್ತಿಯಲ್ಲಿಯ ಯೋಗ್ಯತೆಯನ್ನರಿತು ಅದಕ್ಕನುಗುಣವಾಗಿ ಸಾಧನೆಯನ್ನು ನಡೆಸಲು ಸ್ಫೂರ್ತಿ ದೊರಕಿಸಬೇಕು. ಶ್ರೀರಾಘವೇಂದ್ರಸ್ವಾಮಿಗಳು 'ಪ್ರಾತಃಸಂಕಲ್ಪಗದ್ಯ' ದಲ್ಲಿ ಇದನ್ನೇ ತಿಳಿಸಿರುವರು: **'ಕರಿಷ್ಯೇ....ಕಾರಯಿಷ್ಯೇ ಚ'** ನಾನು ಮಾಡುವುದಲ್ಲದೆ, ನನಗೆ ಸೇರಿದ ಜನಗಳಿಂದ ಮಾಡಿಸುತ್ತೇನೆ ಕೂಡಾ – ಎಂಬುದಾಗಿ. ಭೀಮಸೇನನ ಪ್ರೇರಣೆ ದೊರೆತಾಕ್ಷಣ ಅರ್ಜುನ ಹಿಂದೆ ಮುಂದೆ ನೋಡದೆ ಗುರುಗಳ ಇಷ್ಟಾರ್ಥವನ್ನು ಈಡೇರಿಸುವುದಾಗಿ ಪ್ರತಿಜ್ಞೆ ಮಾಡಿಯೇ ಬಿಡುವನು. ದೊಡ್ಡವರು ಪ್ರೇರಣೆ ನೀಡಿದರೆಂದರೆ ಮುಂದೆ ಅದನ್ನು ನಡೆಸುವ ಹೊಣೆಗಾರಿಕೆಯನ್ನೂ ಅವರು ಚೆನ್ನಾಗಿ ನಿರ್ವಹಿಸುತ್ತಾರೆ ಎಂಬುದು ಅರ್ಜುನನಿಗೆ ತಿಳಿದಿತ್ತು. ಪ್ರತಿಜ್ಞೆ ಮಾಡಲು ಸೂಚಿಸುತ್ತಿರುವ ಭೀಮಸೇನ ಆ ಪ್ರತಿಜ್ಞೆಯನ್ನು ಈಡೇರಿಸುವಲ್ಲಿ ಪೂರ್ಣಸಹಕಾರ ನೀಡುವನು ಎಂಬ ನಿಶ್ಚಯದಿಂದ ಅರ್ಜುನ ಪ್ರತಿಜ್ಞೆ ಮಾಡುವನು.

## ಕರ್ಣ ಕ್ಷತ್ರಿಯ ಅಲ್ಲ

ದ್ರೋಣರ ಮೂಲಕ ರಾಜಕುಮಾರರಿಗೆ ಸಕಲ ಶಸ್ತ್ರಾಸ್ತ್ರ ವಿದ್ಯಾಭ್ಯಾಸ ಪೂರ್ಣಗೊಂಡಿತ್ತು. ರಾಜಕುಮಾರರ ವಿದ್ಯಾಕೌಶಲ ಪ್ರದರ್ಶನಕ್ಕೆ ರಂಗಸ್ಥಳದ ವ್ಯವಸ್ಥೆ ಮಾಡಲಾಗಿತ್ತು. ಅರ್ಜುನ ನೊಣದ ಕಾಲಿಗೂ, ಹಕ್ಕಿಯ ಕಣ್ಣ ರೆಪ್ಪೆಗೂ ಗುರಿಯಿಟ್ಟು ಬಾಣ ಹೊಡೆದು ತನ್ನ ಕೌಶಲ್ಯವನ್ನು ಪ್ರದರ್ಶಿಸಿದನು. ಆಗ ಅಲ್ಲಿಗೆ ಆಗಮಿಸುವ ಕರ್ಣ ಅವನಿಗಿಂತಲೂ ಚೆನ್ನಾಗಿ ತನ್ನ ಕೌಶಲವನ್ನು ತೋರಿಸಿದನು. ಇದನ್ನು ಸಹಿಸದ ಅರ್ಜುನ ಅವನನ್ನು ಯುದ್ಧಕ್ಕೆ ಆಹ್ವಾನಿಸುವನು. ಕೂಡಲೇ ಭೀಮಸೇನ ಅರ್ಜುನನನ್ನು ತಡೆಯುವನು; ಕ್ಷತ್ರಿಯನಾದವನು ಕ್ಷತ್ರಿಯನಲ್ಲದವನನ್ನು ಯುದ್ಧಕ್ಕೆ ಹಾಗೆ ಕರೆಯಕೂಡದು' – ಎಂಬ ಕ್ಷತ್ರಿಯ ಧರ್ಮವನ್ನು ಅರ್ಜುನನಿಗೆ ಜ್ಞಾಪಿಸಿ ಕೊಡುವನು. ಕ್ಷತ್ರಿಯನು ಶಸ್ತ್ರಾಸ್ತ್ರಗಳ ತಿಳುವಳಿಕೆವುಳ್ಳವನಾಗಿರುತ್ತಾನೆ. ಕ್ಷತ್ರಿಯನಲ್ಲದವನಿಗೆ ಈ ತಿಳುವಳಿಕೆ ಇರುವುದಿಲ್ಲ ಆದ್ದರಿಂದ ಕ್ಷತ್ರಿಯನಾದವನು ಅಕ್ಷತ್ರಿಯನ ಜೊತೆಗೆ ಕಾದಾಟಕ್ಕೆ ಇಳಿದರೆ ಆದರಿಂದ ಅಕ್ಷತ್ರಿಯನಾದವನಿಗೆ ಹಾನಿಯಾಗುವುದು. ಇದು ಅಕ್ಷತ್ರಿಯರ ಮೇಲಿನ ಹಿತದೃಷ್ಟಿಯಿಂದ ರೂಪಿಸಲ್ಪಟ್ಟ ನಿಯಮವೇ ಹೊರತು ಅವರನ್ನು

ಅವಮಾನಿಸುವುದಕ್ಕಲ್ಲ. ಕರ್ಣನು ಕ್ಷತ್ರಿಯನಲ್ಲದ ಪ್ರಯುಕ್ತ ಅಂತಹವನನ್ನು ಯುದ್ಧಕ್ಕೆ ಕರೆದರೆ ಅಕ್ಷತ್ರಿಯನನ್ನು ಯುದ್ಧಕ್ಕೆ ಆಹ್ವಾನಿಸಿದಂತಾಗುವುದೆಂದು ಭೀಮಸೇನನು ಸೂಚಿಸುವನು. ಕರ್ಣನೂ ಯುಧಿಷ್ಠಿರಾದಿಗಳಂತೆ ಕುಂತಿಯಲ್ಲೇ ಹುಟ್ಟಿದವನು. ಆದರೆ ಸೂತನ ಮನೆಯಲ್ಲಿ ಬೆಳೆದ ಕರ್ಣನಿಗೆ ಕ್ಷತ್ರಿಯ ಸಂಸ್ಕಾರ ಆಗದ ಪ್ರಯುಕ್ತ ಅವನು ಕ್ಷತ್ರಿಯ ಎನಿಸಲಾರ:

**ಅಕ್ಷತ್ರಸಂಸ್ಕಾರಯುತೋ ಜಾತೋಽಪಿ ಕ್ಷತ್ರಿಯೇ ಕುಲೇ ।**
**ನ ಕ್ಷತ್ರಿಯೋ ಹಿ ಭವತಿ ಯಥಾ ವ್ರಾತ್ಯೋ ದ್ವಿಜೋತ್ತಮಃ ॥**

ಬ್ರಾಹ್ಮಣಕುಲದಲ್ಲಿ ಹುಟ್ಟಿದ್ದರೂ ಕಾಲಕಾಲಕ್ಕೆ ಉಪನಯನಾದಿ ಶಾಸ್ತ್ರವಿಹಿತಸಂಸ್ಕಾರಗಳನ್ನು ಹೊಂದದಿದ್ದರೆ ಅವನು ಹೇಗೆ 'ಬ್ರಹ್ಮಬಂಧು' – ಎನ್ನಿಸುವನೋ ಹಾಗೆ ಕ್ಷತ್ರಿಯನಾಗಿ ಹುಟ್ಟಿದವನಿಗೂ ಕ್ಷತ್ರಿಯೋಚಿತ ಸಂಸ್ಕಾರ ದೊರಕದಿದ್ದರೆ ಅವನು ಕ್ಷತ್ರಬಂಧುವೇ ಹೊರತು ಕ್ಷತ್ರಿಯ ಎನ್ನಿಸಲಾರನು.

ಶ್ರೀಕೃಷ್ಣ ಹಾಗೂ ಬಲರಾಮ ವೈಶ್ಯನಾದ ನಂದಗೋಪನ ಮನೆಯಲ್ಲಿ ಬೆಳೆದವರು. ಆದರೂ ವಸುದೇವ ಗರ್ಗಾಚಾರ್ಯರನ್ನು ನಂದಗೋಕುಲಕ್ಕೆ ಕಳುಹಿಸಿ ಅವರಿಗೆ ಕ್ಷತ್ರಿಯಸಂಸ್ಕಾರವೇ ದೊರಕುವಂತೆ ಮಾಡಿದ್ದನು. ಭಾಗವತ ಹಾಗೂ ಹರಿವಂಶದಲ್ಲಿ ಈ ವಿಚಾರ ಬಂದಿದೆ. ಹೀಗೆ ವೈಶ್ಯನ ಮನೆಯಲ್ಲಿ ಬೆಳೆದರೂ ಕೃಷ್ಣ ಬಲರಾಮರಿಗೆ ಕ್ಷತ್ರಿಯಸಂಸ್ಕಾರ ದೊರಕಿದ್ದುದರಿಂದ ಲೌಕಿಕದೃಷ್ಟಿಯಲ್ಲಿ ಅವರು ಕ್ಷತ್ರಿಯರೆನಿಸಬಹುದಾಗಿದೆ. ಕ್ಷತ್ರಿಯನಾದವನು ಅಕ್ಷತ್ರಿಯರ ಜೊತೆಗೆ ಕಾದಾಡಬಾರದೆಂಬ ನಿಯಮದ ಪರಿಜ್ಞಾನವೂ, ಕರ್ಣ ಕ್ಷತ್ರಿಯನಲ್ಲ ಎಂಬ ಸೂಕ್ಷ್ಮಪ್ರಮೇಯದ ಪರಿಜ್ಞಾನವೂ ಸರ್ವಜ್ಞನಾದ ಭೀಮನಿಗಿತ್ತು. ಆದರೆ ಅರ್ಜುನನಿಗೂ ಭೀಷ್ಮದ್ರೋಣಾದಿ ಇತರರಿಗೂ ಇವೆರಡೂ ತಿಳಿದಿರಲಿಲ್ಲ.

ಕರ್ಣ ಕ್ಷತ್ರಿಯ ಸಂಸ್ಕಾರಕ್ಕೊಳಗಾಗದ ಪ್ರಯುಕ್ತ ಕ್ಷತ್ರಿಯನಲ್ಲ. ಅವನ ವಿರುದ್ಧ ಕಾದಾಡಬಾರದೆಂದು ಸೂಚಿಸಿದ ಭೀಮಸೇನ ಮುಂದೆ ನಡೆಯುವ ಮಹಾಭಾರತ ಯುದ್ಧದಲ್ಲಿ ಅರ್ಜುನ ಕರ್ಣನ ವಿರುದ್ಧವಾಗಿ ನಡೆಸಿದ ಕಾದಾಟಕ್ಕೆ ತಾನೂ ಯಾಕೆ ನೆರವು ನೀಡಿದ ? ಅಲ್ಲದೆ ಕರ್ಣನ ವಿರುದ್ಧವಾಗಿ ಭೀಮಸೇನನೂ ಕಾದಾಡಿದ್ದಾನೆ. ಇದು ಹೇಗೆ ಯುಕ್ತವೆಂಬ ಆಕ್ಷೇಪ ಸಹಜ. ಇದಕ್ಕೆ ಸಮಾಧಾನ ಹೀಗಿದೆ. ಕ್ಷತ್ರಿಯನಾದವನು ತಾನಾಗಿಯೇ ಅಕ್ಷತ್ರಿಯನನ್ನು ಕಾದಾಟಕ್ಕೆ ಆಹ್ವಾನಿಸಬಾರದು – ಎಂಬುದು ನಿಯಮ. ಆದ್ದರಿಂದ ಒಂದು ವೇಳೆ

ಅಕ್ಷತ್ರಿಯನಾದವನು ತಾನಾಗಿಯೇ ಕ್ಷತ್ರಿಯನ ವಿರುದ್ಧ ಕಾದಾಟಕ್ಕೆ ಬಂದರೆ ಆಗ ಅವನನ್ನು ಎದುರಿಸಲು ಕ್ಷತ್ರಿಯ ಕಾದಾಡಬಹುದು. ಮಹಾಭಾರತ ಯುದ್ಧಕ್ಕೆ ಪಾಂಡವರನ್ನು ಕರೆದವರು ಕೌರವರೇ ಹೊರತು ಪಾಂಡವರು ತಾವಾಗಿಯೇ ಯುದ್ಧಕ್ಕೆ ತೊಡಗಿದವರಲ್ಲ. ಆದ್ದರಿಂದ ಅಂತಹ ಮಹಾಭಾರತಯುದ್ಧದ ಘಟಕವಾದ ಕರ್ಣನ ವಿರುದ್ಧ ಕಾದಾಟವೂ ಶತ್ರುಗಳೇ ಕರೆದ ಯುದ್ಧವಾಗುವ ಪ್ರಯುಕ್ತ, ಅವನನ್ನು ಎದುರಿಸಲು ಅರ್ಜುನ, ಭೀಮಸೇನ ಕರ್ಣನಜೊತೆಗೆ ಕಾದಾಡಿದ್ದು ಅಧರ್ಮ ಎನ್ನಿಸಲಾರದು. ಯತಿಗಳು ವಿರಕ್ತರು; ವಿರಕ್ತರು ಮಲ್ಲಯುದ್ಧಾದಿಗಳಲ್ಲಿ ತೊಡಗಬಾರದು, ಹಾಗೆ ತೊಡಗುವುದು ಯತಿಧರ್ಮಕ್ಕೆ ವಿರುದ್ಧ. ಈ ಧರ್ಮಸೂಕ್ಷ್ಮವನ್ನು ಚೆನ್ನಾಗಿಯೇ ಅರಿತಿದ್ದ ಶ್ರೀಮಧ್ವಾಚಾರ್ಯರು ಎಂದೂ ತಾವಾಗಿಯೇ ಮಲ್ಲಯುದ್ಧಾದಿಗಳಿಗೆ ಆಹ್ವಾನವಿತ್ತವರಲ್ಲ. ಆದರೆ ಕಾಂತಾವರದಲ್ಲಿ ತನ್ನ ಸಹೋದರ ಸಹಿತನಾದ ಗಂಡವಾಟ ಬಲಪ್ರದರ್ಶನಕ್ಕಾಗಿ ಬಂದಾಗ ಅವನಿಗೆ ಅದಕ್ಕೆ ಅವಕಾಶ ಕೊಟ್ಟರು. ಸಹೋದರಸಹಿತನಾದ ಗಂಡವಾಟ ಶ್ರೀಮಧ್ವಾಚಾರ್ಯರ ಕುತ್ತಿಗೆ ಅಮುಕಲು ಯತ್ನಿಸಿದ. ನೆಲದ ಮೇಲೆ ಊರಿದ ಅವರ ಹೆಬ್ಬೆರಳನ್ನು ಮೇಲಕ್ಕೆತ್ತಲು ಯತ್ನಿಸಿದ. ಆದರೆ ಯಾವುದನ್ನೂ ನಡೆಸಲಾಗದೆ ಸೋತುಹೋದ. ಹೀಗೆ ಗಂಡವಾಟನಿಗೆ ಬಲಪ್ರದರ್ಶನಕ್ಕೆ ಅವಕಾಶ ಕೊಟ್ಟದ್ದರಿಂದ ಶ್ರೀಮಧ್ವಾಚಾರ್ಯರ ಯತಿಧರ್ಮಕ್ಕೇನೂ ಧಕ್ಕೆ ಬರಲಿಲ್ಲ; ಏಕೆಂದರೆ ಶ್ರೀಮಧ್ವಾಚಾರ್ಯರು ತಾವಾಗಿಯೇ ಆ ಜಟ್ಟಿಗಳಿಗೆ ಆಹ್ವಾನ ಕೊಟ್ಟಿದ್ದಲ್ಲ. ಆ ಜಟ್ಟಿಗಳೇ ಅವಕಾಶ ಕೇಳಿಕೊಂಡು ಬಂದಾಗ ತಮ್ಮಲ್ಲಿ ಭಗವಂತನ ಅನುಗ್ರಹ ವಿಶೇಷದ ಪ್ರದರ್ಶನಕ್ಕಾಗಿಯಷ್ಟೇ ಅನುಮತಿ ನೀಡಿದರು ಅಲ್ಲದೇ ಆಗಲೂ ತಾವು ಅವರೊಂದಿಗೆ ಸ್ವತಃ ಕಾದಾಡದೇ ಸುಮ್ಮನೆ ಕುಳಿತಿದ್ದೇ ಅವರಿಗೆ ಮಾತ್ರ ಅವಕಾಶ ನೀಡಿ ಅವರ ಅಸಾಮರ್ಥ್ಯವನ್ನು ಪ್ರಕಟಿಸಿ ಪರಾಭವಗೊಳಿಸಿದರು. ಸನ್ಯಾಸಧರ್ಮಕ್ಕೆ ಸ್ವಲ್ಪವೂ ಚ್ಯುತಿ ಬರದಂತೆ ಆಗಲೂ ವರ್ತಿಸಿದರು. ಅಂತೆಯೇ ಕೌರವರು ಘೋಷಿಸಿದ ಮಹಾಭಾರತ ಯುದ್ಧದಲ್ಲಿ ಭೀಮಸೇನ ಕರ್ಣನ ವಿರುದ್ಧವಾಗಿ ಕಾದಾಡಿದ್ದು ಹೀಗೆ ಕ್ಷತ್ರಿಯಧರ್ಮಕ್ಕೆ ವಿರುದ್ಧವೆನಿಸುವುದಿಲ್ಲ.

ಹಾಗಾದರೆ ಕರ್ಣ ಯಾವಜಾತಿಯವನು? **'..ಕರ್ಣಾಯಾದಾತ್ ಪ್ರತೋದಕಮ್'** – ಕರ್ಣನ ಕೈಗೆ ಚಾಟಿಯನ್ನು ಕೊಡುವ ಮೂಲಕ ನೀನು ಚಾಟಿ ಹಿಡಿಯಲು ಯೋಗ್ಯನಾದ ಸೂತ ಜಾತಿಯವನೇ ಹೊರತು ಶಸ್ತ್ರ ಹಿಡಿಯಲು

ಯೋಗ್ಯನಾದ ಕ್ಷತ್ರಿಯನಲ್ಲ – ಎಂದು ಭೀಮಸೇನ ಸೂಚ್ಯವಾಗಿ ತಿಳಿಸುವನು. ಭೀಷ್ಮದ್ರೋಣಾದಿಗಳಿಗೆ ತಿಳಿಯದ ಸೂಕ್ಷ್ಮಪ್ರಮೇಯ ಭೀಮಸೇನನಿಗೆ ತಿಳಿದಿತ್ತು. ಕರ್ಣ ಅದನ್ನು ಒಪ್ಪಿಕೊಳ್ಳಬೇಕಾಯಿತು.

## ದುರ್ಯೋಧನನ ಔದಾರ್ಯದ ಧೂರ್ತತನ

ಕರ್ಣ ಹತಾಶನಾಗಿದ್ದನು. ತುಂಬಿದ ಸಭೆಯಲ್ಲಿ ನಿರುತ್ತರನಾಗಿದ್ದನು. ಇದನ್ನು ದುರ್ಯೋಧನ ಗಮನಿಸುವನು. ಅವನಿಗೆ ಒಂದು ದುರ್ಯೋಚನೆ ಹೊಳೆಯುವುದು. ಇಂತಹ ಸಂದರ್ಭದಲ್ಲಿ ಕರ್ಣನಿಗೆ ನೆರವು ನೀಡಿದಂತೆ ನಡೆದುಕೊಂಡು ಬಿಟ್ಟರೆ ಜೀವನವಿಡೀ ಅವನು ತನ್ನ ಹಂಗಿನಲ್ಲಿ ಬದುಕುವಂತಾಗುವುದು. ಹೀಗೆ ಕರ್ಣನ ಅಸಾಹಾಯಕ ಸ್ಥಿತಿಯ ದುರ್ಲಾಭ ಪಡೆದುಕೊಳ್ಳುವ ದುರಾಲೋಚನೆಗೆ ಅವನು ಒಳಗಾಗುವನು. ಅನೇಕ ವಿಮರ್ಶಕರೆಲ್ಲ ಕರ್ಣನಿಗೆ ಬಂದ ಜಾತಿಸಮಸ್ಯೆಯನ್ನು ಪರಿಹರಿಸಿದನೆಂದು ದುರ್ಯೋಧನನ್ನು ಬಾಯ್ತುಂಬ ಹೊಗಳಿದ್ದುಂಟು. ಆದರೆ ದುರ್ಯೋಧನನಿಗೆ ಕರ್ಣನ ಜಾತಿಯ ಅಪಮಾನವನ್ನು ಪರಿಹರಿಸುವುದಕ್ಕಿಂತಲೂ ಮುಖ್ಯವಾಗಿ ಬೇಕಾಗಿದ್ದು ಅವನನ್ನು ತನ್ನ ಹಂಗಿನಲ್ಲಿ ಸಿಕ್ಕಿಸಿಕೊಳ್ಳುವುದು. ಅವನ ಈ ದುರಾಲೋಚನೆಯ ಹಿನ್ನೆಲೆಯನ್ನು ಪರಿಶೀಲಿಸದೆ ಅವನನ್ನು ಪ್ರಶಂಸಿಸುವುದು ಸರ್ವಥಾ ಸಮಂಜಸವಲ್ಲ.

ಕರ್ಣನಿಗಾಗಿ ಜಾತಿಪ್ರಯುಕ್ತವಾದ ಅಪಮಾನವನ್ನು ಪರಿಹರಿಸಲು ಅವನೊಂದು ಕೆಟ್ಟ ಮಾರ್ಗವನ್ನು ಅನುಸರಿಸುವನು. ರಾಜ್ಯವನ್ನು ಆಳುವವನು ಕ್ಷತ್ರಿಯ. ಕರ್ಣ ಕ್ಷತ್ರಿಯ ಎಂದಾಗಬೇಕಾದರೆ ರಾಜ್ಯವನ್ನು ಆಳುವಂತಾಗಬೇಕು, ಅದಕ್ಕೆ ಅವನಿಗೆ ರಾಜ್ಯಕೊಡಬೇಕು. ಅದಕ್ಕಾಗಿ ಆ ಕರ್ಣನಿಗೆ ಅಂಗರಾಜ್ಯವನ್ನು ಕೊಡುವುದಾಗಿ ಘೋಷಿಸುವನು. ಉಪನಯನ ಮಾತ್ರದಿಂದ ಯಾರೂ ದ್ವಿಜರಾಗಬಹುದು ಎಂಬ ತಪ್ಪು ಕಲ್ಪನೆಯಂತೆ.

ದುರ್ಯೋಧನ ಕರ್ಣನಿಗೆ ಕೊಟ್ಟ ಅಂಗರಾಜ್ಯ ಮೂಲತಃ ಕರ್ಣನ ಸಾಕುತಂದೆ ಅತಿರಥನಿಗೆ ಸೇರಿದ್ದು. ಜರಾಸಂಧ ಕಾದಾಡಿ ಅದನ್ನು ತನ್ನ ವಶ ಮಾಡಿಕೊಂಡಿದ್ದ. ಭೀಮಸೇನ ಜರಾಸಂಧನ ವಿರುದ್ಧ ಕಾದಾಡಿ ಅದನ್ನು ತನ್ನ ಸಾಮ್ರಾಜ್ಯಕ್ಕೆ ಸೇರಿಸಿದ್ದ. ಆದ್ದರಿಂದ ಒಂದು ದೃಷ್ಟಿಯಲ್ಲಿ ಅದು ಕರ್ಣನಿಗೇ ಸೇರಬೇಕಾಗಿದ್ದ ರಾಜ್ಯ. ಅವನದನ್ನು ಅವನಿಗೇ ಕೊಡುವುದರಲ್ಲಿ ಅಂತಹ ಔದಾರ್ಯವೇನೂ ಇಲ್ಲ. ಅಷ್ಟೇ ಅಲ್ಲದೆ, ನ್ಯಾಯದ ದೃಷ್ಟಿಯಿಂದ ಅದು

ಭೀಮಸೇನನ ಅಧಿಕಾರಕ್ಕೆ ಒಳಪಡಬೇಕಾದದ್ದು, ಯಾಕೆಂದರೆ ಭೀಮಸೇನ ಪರಾಕ್ರಮದಿಂದ ಗೆದ್ದು ತಂದ ರಾಜ್ಯ ಅದು. ಯಾರೋ ಗೆದ್ದುತಂದ ರಾಜ್ಯವನ್ನು ದಾನ ಮಾಡುವ ಅರ್ಹತೆ ಮತ್ತ್ಯಾರಿಗೋ ಹೇಗೆ ತಾನೇ ಬಂದೀತು ? ಯಾರಿಗೋ ಸೇರಿದ ಪದಾರ್ಥವನ್ನು ಮತ್ತ್ಯಾರೋ ದಾನ ಮಾಡಿದನೆಂದರೆ ಅದು ದುರ್ದಾನ ಎನಿಸುವುದು. ದುರ್ಯೋಧನ ಆಗ ಕರ್ಣನಿಗೆ ಮಾಡಿದ ದಾನವೂ ಇಂತಹುದ್ದೇ ಎನಿಸುವುದು. ಭೀಮಸೇನ ಆ ಬಗ್ಗೆ ತಕರಾರು ಎತ್ತಿದರೆ ದುರ್ಯೋಧನನಿಗೆ ಏನೂ ಉತ್ತರ ಕೊಡಲು ಆಗುತ್ತಿರಲಿಲ್ಲ . ಆದರೆ ಭೀಮಸೇನ ಕರ್ಣ ಮತ್ತು ದುರ್ಯೋಧನರ ನಂಟು ದೃಢವಾಗಬೇಕೆಂಬ ಭಗವಂತನ ಸಂಕಲ್ಪವನ್ನರಿತು, 'ಪಿತೃದೇವೋ ಭವ' ಎಂಬ ಆದರ್ಶವನ್ನು ಮುಂದೆ ಮಾಡಿಕೊಂಡು ಸುಮ್ಮನಿದ್ದ. ಆದ್ದರಿಂದ ಸೂಕ್ಷ್ಮವಾಗಿ ಪರಿಶೀಲಿಸಿದರೆ ಈ ಪ್ರಸಂಗದಲ್ಲಿ ಎದ್ದುಕಾಣುವುದು ಭೀಮಸೇನನ ಔದಾರ್ಯವೇ ಹೊರತು ದುರ್ಯೋಧನದ್ದಲ್ಲ; ಅವನದು ಏನಿದ್ದರೂ ಸಮಯಸಾಧಕತನ, ಧೂರ್ತತನ ಮಾತ್ರ. ಹೆಚ್ಚಿನವರು ಇದನ್ನು ಗಮನಿಸಿಯೇ ಇಲ್ಲ ಎಂಬುದು ಆಶ್ಚರ್ಯಕರ.

## ಭೀಮನ ಸಂಕಲ್ಪ ಗೆದ್ದಿತು

ಮುಂದೆ ಅಸ್ತ್ರವಿದ್ಯಾಪರೀಕ್ಷೆಗಾಗಿ ಭೀಮದುರ್ಯೋಧನರು ಎದ್ದರು. ಅವರಿಬ್ಬರ ಅಸ್ತ್ರವಿದ್ಯಾಪರೀಕ್ಷೆ ಎಷ್ಟು ಪ್ರೇಕ್ಷಣೀಯವಾಗಿತ್ತೆಂದರೆ ಅದನ್ನು ಕಾಣಲು ಗಗನದಲ್ಲಿ ದೇವತೆಗಳೂ ದೈತ್ಯರೂ ಸೇರಿದ್ದರು. ದ್ರೋಣಾಚಾರ್ಯರಿಗೆ ಭಯವಾಗುವುದು. ಭೀಮ ದುರ್ಯೋಧನರೊಳಗೆ ಹೋರಾಟ ಪ್ರಾರಂಭವಾಯಿತೆಂದರೆ ಭೀಮ ದುರ್ಯೋಧನನನ್ನು ಮುಗಿಸಿಯೇ ಬಿಡುವನು. ಮಹಾಭಾರತ ಇಲ್ಲಿಗೇ ಕೊನೆಗೊಳ್ಳುವ ಪ್ರಸಂಗ. ಅದರೊಂದಿಗೆ ದ್ರೋಣಾಚಾರ್ಯರಿಗೆ ಮುಖ್ಯ ಬೇಕಾದುದು ದ್ರುಪದನನ್ನು ಸೋಲಿಸಿ ಅವಮಾನಗೊಳಿಸಬೇಕೆಂಬ ತನ್ನ ಬಯಕೆಯೂ ಕಮರಿಹೋಗುವುದು ಎಂಬ ಆತಂಕ. ಆಗ ಅಶ್ವತ್ಥಾಮಾಚಾರ್ಯರಿಗೆ ಅವರ ಕಾರ್ಯವನ್ನು ನಿಲ್ಲಿಸಲು ಹೇಳುವರು. ಅಶ್ವತ್ಥಾಮಾಚಾರ್ಯರು ಬಂದು ಭೀಮನ ಕೈಯನ್ನೂ ಹಿಡಿದುಕೊಳ್ಳುವರು, ದುರ್ಯೋಧನನ ಕೈಯನ್ನೂ ಹಿಡಿದುಕೊಳ್ಳುವರು; ನಿಮ್ಮ ನಿಮ್ಮ ಯೋಗ್ಯತೆಯಲ್ಲಿ ನಿಮಗೆ ಸರಿಸಾಟಿಯಾದವರು ಬೇರಾರೂ ಇಲ್ಲ ಎಂದು ನುಡಿಯುತ್ತ ಅವರ ಕಾದಾಟಪ್ರಸಂಗವನ್ನು ತಡೆಯುವರು. ಭೀಮ ಜೀವೋತ್ತಮನಾಗಿದ್ದು ಅವನಿಗೆ ಸಮನಾದ ಇನ್ನೊಬ್ಬ ಉತ್ತಮ ಜೀವನಿಲ್ಲ;

ದುರ್ಯೋಧನ ಜೀವಾಧಮನಾಗಿದ್ದು ಅವನಿಗೆ ಸಮನಾದ ಮತ್ತೊಬ್ಬ ಕೆಟ್ಟ ಜೀವವಿಲ್ಲ ಎಂಬುದು ಅಶ್ವತ್ಥಾಮಾಚಾರ್ಯರ ಅಭಿಪ್ರಾಯ. ಭೀಮಸೇನ ಅವರ ಮಾತನ್ನು ಅರ್ಥಮಾಡಿಕೊಂಡು ಸುಮ್ಮನಾದ. ದುರ್ಯೋಧನ ಅದನ್ನು ಅಪಾರ್ಥ ಮಾಡಿಕೊಂಡು ತಾನು ತುಂಬಾ ಪರಾಕ್ರಮಿಯಾಗಿರುವೆನೆಂದು ಭ್ರಮಿಸಿ ಸುಮ್ಮನಾದ.

ದುರ್ಯೋಧನನಿಗೆ ಕರ್ಣನ ಈ ಪ್ರಸಂಗದಿಂದಾಗಿ ಒಂದು ಆಶಾಕಿರಣ ಮೂಡುವುದು; ಮುಂದೆ ತಾನು ಕರ್ಣನ ಮೂಲಕ ಅರ್ಜುನನನ್ನು ಕೊಲ್ಲಿಸಬಹುದು; ಅದಕ್ಕಾಗಿ ಅವನನ್ನು ತನ್ನೊಡನೆ ಇರಿಸಿಕೊಳ್ಳುವುದು ಉಚಿತ. ಅದರ ಸಂಕೇತವಾಗಿ ಅವನು ಕರ್ಣನ ಕೈ ಹಿಡಿದುಕೊಂಡು ಸಾಗುವನು. ಸೂಕ್ಷ್ಮಪ್ರಜ್ಞೆಯ ಭೀಮಸೇನನಿಗೆ ಅವನ ಆಂತರ್ಯ ತಿಳಿಯುವುದು. ತಕ್ಷಣ ಅದಕ್ಕೆ ಪ್ರತಿಕ್ರಿಯಿಸುವನು, ಅರ್ಜುನನ ಕೈ ಹಿಡಿದುಕೊಂಡು ತಾನು ಸಾಗುವನು. ಅರ್ಜುನನ ಮೂಲಕ ಕರ್ಣನ ಸಂಹಾರವನ್ನು ತಾನು ನಡೆಸುವೆನೆಂದು ಆ ಮೂಲಕ ಸೂಚಿಸುವನು. ಮುಂದೆ ಭೀಮನ ಸಂಕಲ್ಪ ಸತ್ಯವಾಗುವುದೋ, ದುರ್ಯೋಧನನ ಸಂಕಲ್ಪ ಸತ್ಯವಾಗುವುದೋ ಎಂಬುದು ಎಲ್ಲರಿಗೂ ತಿಳಿದದ್ದೇ. ಯಾವ ಮಹಾಭಾರತದಲ್ಲಿಯೂ ಇಂತಹ ಪ್ರಮುಖ ಘಟನೆಗಳಲ್ಲಿ ಯಾವುದೇ ವ್ಯತ್ಯಾಸ ಮಾಡಲಾಗುವುದಿಲ್ಲ. ಭೀಮನ ಸಂಕಲ್ಪ ಸತ್ಯವಾಗಿರುವುದರಿಂದಲೇ ಅವನು 'ಮಹಾನಾಯಕ' ಎಂಬುದು ಸ್ಪಷ್ಟ. **'ಯಂ ಯಂ ಸುಖೀ ಕಾಮಯತೇಽರ್ಥಮತ್ರ ಸಂಕಲ್ಪಮಾತ್ರಾತ್ ಸಕಲೋಽಪಿ ಸ ಸ್ಯಾತ್'** – ಎಂಬುದಾಗಿ ಸತ್ಯಸಂಕಲ್ಪತ್ವವು ಮುಕ್ತರ ಲಕ್ಷಣ. ಋಜುಗಳಲ್ಲಿ ಸಂಸಾರಾವಸ್ಥೆಯಲ್ಲಿಯೂ ಅದು ಕಂಡು ಬರುವುದು. ಈ ಅಂಶದಲ್ಲೂ **'ಭೀಮಸೇನಸಮೋ ನಾಸ್ತಿ ಸೇನಯೋರುಭಯೋರಪಿ..'** ಎಂಬ ಮಾತು ಯಥಾರ್ಥವಾಗಿದೆ.

## ಯುಧಿಷ್ಠಿರನಿಗೆ ಪಟ್ಟಾಭಿಷೇಕ

ದ್ರೋಣಾಚಾರ್ಯರು ತಮಗೆ ಗುರುದಕ್ಷಿಣೆಯಾಗಿ ದ್ರುಪದನನ್ನು ಸೆರೆಹಿಡಿದು ತರಬೇಕೆಂದು ಶಿಷ್ಯರಲ್ಲಿ ತಿಳಿಸುವರು. ಇಷ್ಟೇ ಆದರೆ ತಾವೇ ಯಾಕೆ ಮಾಡಬಾರದು? ಎಂದು ಕೌರವರು ಹೊರಡುವರು. ಕರ್ಣನ ನೆರವಿನಿಂದ ತಾನು ಏನನ್ನೂ ಸಾಧಿಸಿಬಿಡಬಹುದು ಎಂಬ ಭ್ರಮೆ ದುರ್ಯೋಧನನಿಗಿತ್ತು. ಕೌರವರು ಮೊದಲು ಹೋಗಲಿ ಎಂದು ಭೀಮಸೇನ ತಿಳಿಸುವನು. **'ಯೋಗ್ಯತಾಭಿಜ್ಞೇನ'** ಎಂದು ಪ್ರಾತಃಸಂಕಲ್ಪಗದ್ಯದಲ್ಲಿ ನೀಡಿದ ವಿಶೇಷಣದಂತೆ ವಾಯುದೇವನ

ಅವತಾರ ಭೀಮಸೇನನಿಗೆ ಯಾವ ಜೀವನ ಯೋಗ್ಯತೆ ಎಷ್ಟು ಎಂಬುದು ಚೆನ್ನಾಗಿ ಗೊತ್ತಿತ್ತು. ದುರ್ಯೋಧನಾದಿಗಳಿಗೆ ದ್ರುಪದನನ್ನು ಸೋಲಿಸುವ ಸಾಮರ್ಥ್ಯ ಇಲ್ಲ. ಅದು ಸ್ಪಷ್ಟವಾಗಬೇಕು. ಪಾಂಡವರೂ ಜೊತೆಗೆ ಹೋಗಿ ದ್ರುಪದನನ್ನು ಸೋಲಿಸಿದರೆ ಮತ್ತೆ ಕೌರವರು ತಾವೇ ದ್ರುಪದನನ್ನು ಸೋಲಿಸಿದವರೆಂದು ಸಾಧಿಸುವ ಸಾಧ್ಯತೆ ಇದೆ. ಹಾಗಾಗಬಾರದೆಂದು ಭೀಮಸೇನ ಮೊದಲು ಕೌರವರು ಹೋಗಲಿ ಎನ್ನುವನು. ಹನುಮದವತಾರದಲ್ಲಿ **'ತೇಷಾಮಶಕ್ತಿಂ ಪ್ರಕಟಾಂ ವಿಧಾಯ..'** ಎಂದಿರುವಂತೆ ಉಳಿದೆಲ್ಲ ಕಪಿಗಳಿಗೆ ಸಮುದ್ರತರಣಕ್ಕೆ ಬೇಕಾದ ಸಾಮರ್ಥ್ಯ ಇಲ್ಲ ಎಂದು ಪ್ರಕಟಗೊಳಿಸುವುದಕ್ಕಾಗಿಯೇ ಮೊದಲು ಸುಮ್ಮನಿದ್ದು, ಜಾಂಬವಂತನ ಪ್ರಾರ್ಥನೆಯ ಬಳಿಕ ಸಮುದ್ರ ಹಾರಲು ಸಿದ್ಧನಾಗುವನೋ ಹಾಗೆ.

ಭೀಮಸೇನನ ನಿರೀಕ್ಷೆಯಂತೆ ದುರ್ಯೋಧನಾದಿಗಳು ಸೋತು ಹಿಂತಿರುಗುವರು. ಅನಂತರ ಭೀಮಾರ್ಜುನರು ತೆರಳಿ ದ್ರುಪದನನ್ನು ಸೆರೆಹಿಡಿದು ತರುವರು. ಹೀಗೆ ದ್ರೋಣಾಚಾರ್ಯರಿಗೆ ಇಷ್ಟವಾದ ಗುರುದಕ್ಷಿಣೆಯನ್ನು ಸಲ್ಲಿಸುವರು.

ಪಾಂಡವರಿಂದ ಸೋತ ದ್ರುಪದ ದ್ರೋಣಾಚಾರ್ಯರನ್ನು ಕೊಲ್ಲತಕ್ಕ ಒಬ್ಬ ಮಗನನ್ನೂ, ಅರ್ಜುನನನ್ನು ಅಳಿಯನನ್ನಾಗಿಸಿಕೊಳ್ಳಲು ಒಬ್ಬ ಮಗಳನ್ನೂ ಪಡೆಯಬೇಕೆಂದು ಯಾಜೋಪಯಾಜರ ಮೂಲಕ ಯಾಗ ಮಾಡಿಸುವನು. ಅದರ ಫಲವಾಗಿಯೇ ಧೃಷ್ಟದ್ಯುಮ್ನ ಹಾಗೂ ದ್ರೌಪದಿ ಜನಿಸುವರು.

ಹೀಗೆ ಪಾಂಡವರು ದ್ರುಪದನನ್ನು ಸೋಲಿಸಿದ ಪರಿಣಾಮವಾಗಿ ಧೃತರಾಷ್ಟ್ರ ಯುಧಿಷ್ಠಿರನಿಗೆ ಪಟ್ಟಾಭಿಷೇಕ ನಡೆಸುವನು. ಭೀಮಸೇನನ ಬೆಂಗಾವಲಿನಿಂದ ಯುಧಿಷ್ಠಿರ ಉತ್ತಮರೀತಿಯಲ್ಲಿ ರಾಜ್ಯವಾಳತೊಡಗುವನು. ಯುಧಿಷ್ಠಿರನ ರಕ್ಷಣೆಗಾಗಿ ಒಬ್ಬ ಮಗ ಬೇಕೆಂದು ವಾಯುದೇವನ ಮೂಲಕ ಭೀಮಸೇನನನ್ನು ಪಡೆದ ಪಾಂಡುರಾಜನ ನಿರೀಕ್ಷೆಯಂತೆ ಎಲ್ಲವೂ ನಡೆಯುತ್ತಿತ್ತು – ಎಂಬುದನ್ನು ಗಮನಿಸುತ್ತಾ ಹೋದರೆ ಭೀಮಸೇನನ ಪಾತ್ರದ ಹಿರಿಮೆ ಸ್ಪಷ್ಟವಾಗುವುದು.

### ಜ್ಯೇಷ್ಠಭ್ರಾತಾ ಪಿತೃಸಮಃ

ಧರ್ಮರಾಜ ತುಂಬ ಜನಪ್ರಿಯರಾಜನಾಗಿ ಮೆರೆಯುತ್ತಿದ್ದ. ಹೀಗೆಯೇ ಮುಂದುವರೆದರೆ ತಮಗೆ ರಾಜ್ಯವೇ ಸಿಗಲಾರದೆಂದು ಯೋಚಿಸಿದ ದುರ್ಯೋಧನಾದಿಗಳು ಪಾಂಡವರನ್ನು ವಾರಣಾವತಕ್ಕೆ ಕಳುಹಿಸಿ, ಅಲ್ಲಿ ಅವರನ್ನೆಲ್ಲ

ಸುಟ್ಟು ಹಾಕಿ ಬಿಡಬೇಕೆಂದು ಸಂಚು ಹೂಡುವರು. ಧೃತರಾಷ್ಟ್ರನ ಮೂಲಕವೇ ಅವರನ್ನು ವಾರಣಾವತಕ್ಕೆ ಕಳಿಸುವ ಕುತಂತ್ರವನ್ನು ಯೋಜಿಸುವರು.

ನಿತ್ಯದಂತೆ ಯುಧಿಷ್ಠಿರ ತನ್ನ ದೊಡ್ಡಪ್ಪನನ್ನು ನಮಸ್ಕರಿಸಲು ಹೋಗುವನು. ದುರ್ಯೋಧನನ ಪ್ರೇರಣೆಗನುಸಾರವಾಗಿ ಧೃತರಾಷ್ಟ್ರ ತಿಳಿಸುವನು: ವಾರಣಾವತದಲ್ಲಿ '**ವಿಷ್ಣುರ್ಜಯಂತ ಇತಿ ಶಂಭುಸಹಾಯ ಆಸ್ತೇ..**' ಜಯಂತ ಹೆಸರಿನ ಪರಮಾತ್ಮ ಅಲ್ಲಿರುವನು ಅವನ ಹೆಸರಿನಲ್ಲಿ ಉತ್ಸವ ನಡೆಯಲಿದೆ. ಅದರಲ್ಲಿ ಪಾಲ್ಗೊಳ್ಳಲು ನೀವು ಅಲ್ಲಿಗೆ ಹೋಗಿ'. ಸಾತ್ವಿಕ ಸ್ವಭಾವದ ಯುಧಿಷ್ಠಿರ ಅದಕ್ಕೆ ಒಪ್ಪಿಕೊಂಡು ಬಂದು ತನ್ನ ತಮ್ಮಂದಿರಲ್ಲಿ ತಿಳಿಸುವನು; ಆಗ ಭೀಮನು ಎಚ್ಚರಿಸುವನು – 'ನೀನು ಅದಕ್ಕೆ ಒಪ್ಪಿಕೊಳ್ಳಬಾರದಿತ್ತು. ಅಲ್ಲಿಗೆ ಹೋಗಿ ಅಂದರೆ ಮತ್ತೆ ಇಲ್ಲಿಗೆ ಬರಬೇಡಿ ರಾಜ್ಯದ ಆಸೆ ಬಿಡಿ. ಭಿಕ್ಷೆಬೇಡಿ ಬದುಕಿ ಎಂಬುದೇ ಅಭಿಪ್ರಾಯ, ಆದ್ದರಿಂದ ಈ ವಿಷಯದಲ್ಲಿ ದೊಡ್ಡಪ್ಪನನ್ನು ವಿರೋಧಿಸಬೇಕು.' ಯುಧಿಷ್ಠಿರನಿಗೆ ಹೌದು ಎನಿಸುವುದು. ಆದರೆ ದೊಡ್ಡಪ್ಪನ ಮಾತನ್ನು ಒಪ್ಪಿಕೊಳ್ಳದಿದ್ದಲ್ಲಿ ಅವರೆಲ್ಲ ಸೇರಿ ನಮ್ಮ ವಿರುದ್ಧ ಯುದ್ಧ ಹೂಡಿಯಾರು ಎಂದಾಗ ಕೂಡಲೇ ಭೀಮಸೇನ ಹೇಳುವನು – ಅವರ ವಿರುದ್ಧ ಹೋರಾಡಲು ತಾನು ಸಿದ್ಧನಿರುವೆನು ಎಂದು. ಇದು ಭೀಮಸೇನನ ಹೊಣೆಗಾರಿಕೆಯ ನಡತೆ. ಸಮಸ್ಯೆಯನ್ನು ಸೃಷ್ಟಿ ಮಾಡಿ ಜಾರಿ ಬಿಡುವುದಲ್ಲ. ಆ ಸಮಸ್ಯೆಯ ಪರಿಹಾರಕ್ಕೆ ಬೇಕಾದ ಕ್ರಮವನ್ನು ನಡೆಸಲೂ ಅವನು ಸಿದ್ಧನಾಗಿದ್ದನು.

ಭೀಮಸೇನನೂ ಗುರುಹಿರಿಯರಿಗೆ ಗೌರವವನ್ನು ಸಲ್ಲಿಸಬೇಕೆಂಬ ನಿಯಮದವನೇ. ಆದರೆ ಗುರುಹಿರಿಯರು ತಮ್ಮ ಹಿರಿಯತನಕ್ಕೆ ಅನುಚಿತವಾಗಿ ನಡೆದುಕೊಂಡಾಗ ಅವರ ಮಾತಿಗೆ ಬೆಲೆಕೊಡಬೇಕಾಗಿಲ್ಲ ಎಂಬುದು ಅವನ ಆಶಯ. ಪ್ರಹ್ಲಾದನೂ ತನ್ನ ಸಹಪಾಠಿಗಳಿಗೆ ಹೀಗೆಯೇ ತಿಳಿಸುವನು: '**ಗುರೂಕ್ತಮಪಿ ನ ಗ್ರಾಹ್ಯಂ ಯದನರ್ಥೇಽರ್ಥಕಲ್ಪನಮ್**'. ಅನರ್ಥಕ್ಕೆ ಕಾರಣವಾಗುವ ಮಾತುಗಳನ್ನು ಗುರುಹಿರಿಯರು ಹೇಳಿದರೂ ಅವುಗಳನ್ನು ಪಾಲಿಸಬೇಕಿಲ್ಲ. ರಾಮನ ತಮ್ಮ ಲಕ್ಷ್ಮಣ ಇನ್ನೂ ಕಟುವಾಗಿ ತಿಳಿಸಿರುವನು :

**ಗುರೋರಪ್ಯವಲಿಪ್ತಸ್ಯ ಕಾರ್ಯಾಕಾರ್ಯಮಜಾನತಃ ।**
**ಉತ್ಪಥಂ ಪ್ರತಿಪನ್ನಸ್ಯ ಕಾರ್ಯಂ ಭವತಿ ಶಾಸನಮ್ ॥**

ಗುರುವೇ ಆಗಿದ್ದರೂ ಅವಿವೇಕಿಯಾಗಿ ಅಡ್ಡದಾರಿ ಹಿಡಿದಲ್ಲಿ ಅವನಿಗೆ ದಂಡನೆಯನ್ನೇ ನೀಡಬೇಕು.

ಯುಧಿಷ್ಠಿರ ಭೀಮಸೇನನ ಅಭಿಪ್ರಾಯವನ್ನು ಒಪ್ಪಿಕೊಂಡರೂ ದೊಡ್ಡಪ್ಪನ ಮಾತನ್ನು ಮೀರುವುದಕ್ಕೆ ಮಾತ್ರ ಸಿದ್ಧನಾಗಲಿಲ್ಲ. ದೊಡ್ಡಪ್ಪ ಹೇಳಿದಂತೆ ವಾರಣಾವತಕ್ಕೆ ಹೋಗುವುದಕ್ಕೆ ಸಿದ್ಧನಾಗುವನು. ಭೀಮಸೇನ ಅವನನ್ನು ಅನುಸರಿಸುವನು.

ಮಹಾಭಾರತವನ್ನು ಓದುವ ಜಿಜ್ಞಾಸುಗಳಿಗೆ ಒಂದು ಪ್ರಶ್ನೆ ಬರುವುದು ಸಹಜ. ಭಗವಂತ ಭೀಮಸೇನನನ್ನೇ ಅಣ್ಣನನ್ನಾಗಿ ಮಾಡಿ ಯುಧಿಷ್ಠಿರನನ್ನು ತಮ್ಮನನ್ನಾಗಿ ಯಾಕೆ ಹುಟ್ಟಿಸಲಿಲ್ಲ. ಇದಕ್ಕೆ ಶ್ರೀಮದಾಚಾರ್ಯರು ಸರಿಯಾಗಿ ಸಮಾಧಾನ ಹೇಳಿರುವರು. ಒಂದು ವೇಳೆ ಭೀಮಸೇನನೇ ಅಣ್ಣನಾಗಿ ಬಿಟ್ಟಿದ್ದರೆ ಮಹಾಭಾರತದ ಎಷ್ಟೋ ಘಟನೆಗಳು ನಡೆಯುತ್ತಿದ್ದಿಲ್ಲ. ಆ ಘಟನೆಗಳು ನಡೆಯದಂತಹ ಕ್ರಮವನ್ನು ಭೀಮಸೇನ ತೆಗೆದುಕೊಳ್ಳುತ್ತಿದ್ದ. ಪ್ರಕೃತ ಧೃತರಾಷ್ಟ್ರ ವಾರಣಾವತಕ್ಕೆ ಹೋಗಬೇಕೆಂದಾಗ 'ನಾವು ಹೋಗುವುದಿಲ್ಲ' ಎಂದು ಖಡಾಖಂಡಿತವಾಗಿ ಭೀಮಸೇನ ಹೇಳಿಬಿಡುತ್ತಿದ್ದ. ಇಲ್ಲೇ ಆ ಪ್ರಯುಕ್ತ ಯುದ್ಧ ನಡೆದು, ದುರ್ಯೋಧನಾದಿಗಳ ಸಂಹಾರ ನಡೆದು ಆದಿಪರ್ವಕ್ಕೇ ಮಹಾಭಾರತ ಮುಗಿದುಬಿಡುತ್ತಿತ್ತು. ಹೀಗಾಗಬಾರದು ಪಾಂಡವರ ಒಳ್ಳೇತನ ಪೂರ್ಣವಾಗಿ ಬೆಳಕಿಗೆ ಬರಬೇಕು. ಹಾಗಾಗಬೇಕಾದರೆ ದುರ್ಯೋಧನನ ದುಷ್ಟತನ ಪೂರ್ಣವಾಗಿ ಹೊರಹೊಮ್ಮಬೇಕು. ಹದಿನೆಂಟು ಪರ್ವಗಳ ಮಹಾಭಾರತ ನಡೆದರಷ್ಟೇ ಇದಕ್ಕೆ ಅವಕಾಶ. ಯುಧಿಷ್ಠಿರ ಅಣ್ಣ ಎಂದಾದರೆ, ಅವನ ಮಾತಿಗೆ ಬೆಲೆ ಕೊಡುತ್ತ ಭೀಮಸೇನ ತನ್ನ ನಿಲುವನ್ನು ಅಡಗಿಸಿಕೊಳ್ಳಬೇಕಾಗುತ್ತದೆ. ಆದರಿಂದಾಗಿ ಆಗಬೇಕಾದ ಘಟನೆಗಳೆಲ್ಲ ನಡೆಯಲೂ ಅವಕಾಶ ದೊರೆತಂತಾಗುತ್ತದೆ.

ಈ ಎಲ್ಲ ಸಂದರ್ಭಗಳಲ್ಲಿ ಭೀಮಸೇನನ ಭ್ರಾತೃಗೌರವವನ್ನು ಗಮನಿಸಬೇಕು. **'ಜ್ಯೇಷ್ಠಭ್ರಾತಾ ಪಿತೃಸಮಃ'** ಎಂಬ ಮಾತಿಗನುಗುಣವಾಗಿ ಯುಧಿಷ್ಠಿರನಿಗೆ ತಂದೆಯ ಸಮಾನವಾದ ಗೌರವವನ್ನು ಹೆಜ್ಜೆ ಹೆಜ್ಜೆಗೆ ಭೀಮಸೇನ ನೀಡುತ್ತಿದ್ದ. ಭರತ ರಾಮಚಂದ್ರನಿಗೆ ಇಂತಹ ಗೌರವವನ್ನು ಸಲ್ಲಿಸಿದ್ದಿರಬಹುದು. ಆದರೆ ರಾಮಚಂದ್ರ ಹೊರಗೆ ಮಾತ್ರವಲ್ಲ ಒಳಗೂ ಹಿರಿಯನೇ. ಆದರೆ ಇಲ್ಲಿ ಹಾಗಲ್ಲ. ಯುಧಿಷ್ಠಿರ ಹೊರಗೆ ಮಾತ್ರ ಅಂದರೆ ಲೋಕದೃಷ್ಟಿಯಲ್ಲಿ ಭೀಮಸೇನನಿಗೆ ಅಣ್ಣ; ಆದರೆ ಒಳಗೆ ಅಂದರೆ ಸ್ವರೂಪಯೋಗ್ಯತೆಯಲ್ಲಿ ಭೀಮಸೇನನಿಗಿಂತ ತುಂಬ ಕೆಳಗಿನವನು. ಆದರೂ ಯುಧಿಷ್ಠಿರನಿಗೆ ಜ್ಯೇಷ್ಠಭ್ರಾತೃವಿಗೆ ಸಲ್ಲಬೇಕಾದ ಗೌರವವನ್ನು ಪೂರ್ಣಪ್ರಮಾಣದಲ್ಲಿ ಸಮರ್ಪಿಸಿ ಈ ನಿಟ್ಟಿನಲ್ಲಿ ದಾಖಲೆ

ಸ್ಥಾಪಿಸಿದ್ದಾನೆ. ಈ ದೃಷ್ಟಿಯಲ್ಲೂ 'ಭೀಮಸೇನ ಸಮೋ ನಾಸ್ತಿ..' ಪುತ್ರನಾಗಿ ತಂದೆಯ ಉಚಿತವಲ್ಲದ ಮಾತನ್ನು ನೆರವೇರಿಸಿದ ಹಿರಿಮೆ ಸರ್ವೋತ್ತಮನಾದ ಶ್ರೀರಾಮನದಾದರೆ, ತಮ್ಮನಾಗಿ ಅಣ್ಣನ ಅನುಚಿತವಾದ ಮಾತನ್ನು ಪಾಲಿಸಿದ ಹಿರಿಮೆ ಜೀವೋತ್ತಮನಾದ ಶ್ರೀಭೀಮಸೇನನದು.

## ಅರಗಿನ ಮನೆ ಅಗ್ನಿಪಾಲಾಯಿತು

ದೊಡ್ಡಪ್ಪ ಧೃತರಾಷ್ಟ್ರನ ಮಾತಿಗೆ ಬೆಲೆಕೊಟ್ಟು ಯುಧಿಷ್ಠಿರ ತಮ್ಮಂದಿರಿಂದ ಹಾಗೂ ತಾಯಿಯಿಂದ ಕೂಡಿಕೊಂಡು ವಾರಣಾವತಕ್ಕೆ ಹೋಗುವನು; ಅಲ್ಲಿ ಪುರೋಚನ ಎಂಬ ತನ್ನ ಮಂತ್ರಿಯ ಮೂಲಕ ಅರಗಿನ ಮನೆಯ ವ್ಯವಸ್ಥೆಯನ್ನು ದುರ್ಯೋಧನ ಮಾಡಿಸಿದ್ದ. ಪುರೋಚನ ಯುಧಿಷ್ಠಿರಾದಿಗಳನ್ನು ಅರಗಿನ ಮನೆಯೊಳಗೆ ಕರೆದೊಯ್ಯುವನು. ಒಳಗೆ ಹೋದಾಕ್ಷಣ ಯುಧಿಷ್ಠಿರನಿಗೆ ವಾಸನೆಯಿಂದ ಅದು ಅರಗಿನಮನೆ ಎಂದು ತಿಳಿಯುವುದು. ವಿದುರ ನೀಡಿದ್ದ ಎಚ್ಚರಿಕೆ ನೆನಪಿಗೆ ಬರುವುದು. ಯುಧಿಷ್ಠಿರ ಭೀಮಸೇನನಲ್ಲಿ 'ನೀನು ನಮ್ಮೆಲ್ಲರ ರಕ್ಷಕ, ಈ ಆಪತ್ತಿನಿಂದ ಪಾರುಮಾಡುವ ಹೊಣೆ ನಿನ್ನದು' – ಎಂದು ಕೇಳಿಕೊಳ್ಳುವನು. ಭೀಮಸೇನನು ಒಪ್ಪಿಕೊಳ್ಳುವನು. ಯುಧಿಷ್ಠಿರ ಹೀಗೆ ಭೀಮನಿಗೆ ಶರಣಾದುದು ಅವನಿಗೆ ಅರಗಿನಮನೆಯಿಂದ ಮಾತ್ರವಲ್ಲದೆ ಜೀವನದುದ್ದಕ್ಕೂ ಎಲ್ಲ ಅಪಾಯಗಳಿಂದಲೂ ಪಾರಾಗಲು ನೆರವಾಯಿತು. ಹನುಮಂತನಿಗೆ ಹೀಗೇ ಶರಣಾಗಿದ್ದ ಸುಗ್ರೀವ ಎಲ್ಲ ವಿಧವಾದ ಅಪಾಯಗಳಿಂದ ಪಾರಾಗಿ ಬದುಕಿದ ರಾಮಾಯಣದ ಪ್ರಸಂಗವನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು.

ಪುರೋಚನ ಪಾಂಡವರೆಲ್ಲ ಮಲಗಿದಾಗ ಆ ಅರಗಿನ ಮನೆಗೆ ಬೆಂಕಿ ಕೊಡಬೇಕೆಂದು ಹೊಂಚು ಹಾಕುತ್ತಿದ್ದ. ಒಂದು ವೇಳೆ ಯಾರಾದರೂ ಎಚ್ಚೆತ್ತಿದ್ದರೆ ಬೆಂಕಿ ಹಚ್ಚಿದಾಕ್ಷಣ ಅರಗಿನ ಮನೆಯಿಂದ ಅವರೆಲ್ಲ ಹೊರಬಂದು ಬಿಡುವ ಸಂಭವ ಇದೆ. ಹೀಗಾಗಬಾರದೆಂದು ಅವನ ಯೋಚನೆ. ಆರು ತಿಂಗಳು ಕಾಯ್ದರೂ ಪಾಂಡವರೆಲ್ಲ ಮಲಗಿದ ಒಂದು ದಿನವೂ ಅವನಿಗೆ ಸಿಗಲಿಲ್ಲ. ಯಾಕೆಂದರೆ ಉಳಿದವರೆಲ್ಲ ಮಲಗಿದರೂ ಭೀಮಸೇನ ಸದಾ ಎಚ್ಚೆತ್ತೇ ಇರುತ್ತಿದ್ದ. ಹೀಗೆ ಆರುತಿಂಗಳ ಕಾಲ ಒಂದು ದಿನವೂ ನಿದ್ದೆ ಮಾಡದೆ ಎಚ್ಚೆತ್ತು ಕುಳಿತಿದ್ದ ಭೀಮಸೇನನೇ ಮುಖ್ಯವಾಗಿ 'ಗುಡಾಕೇಶ' ಹೊರತು ಅರ್ಜುನನಲ್ಲ. ಗುಡಾಕಾ ಎಂದರೆ ನಿದ್ರೆ. ಅದಕ್ಕೆ ಈಶ ಎಂದರೆ ಅದರ ಮೇಲೆ ಪ್ರಭುತ್ವ ಸಾಧಿಸಿದವ ಎಂಬ

ಅಭಿಪ್ರಾಯದಲ್ಲಿ ಅರ್ಜುನ ಇಂದ್ರಕೀಲ ಪರ್ವತದಲ್ಲಿ ತಪಸ್ಸು ಮಾಡುತ್ತಿದ್ದಾಗ ನಿದ್ದೆಯನ್ನು ಗೆದ್ದಿದ್ದನೆಂದು ಅವನನ್ನು 'ಗುಡಾಕೇಶ' ಎಂದು ಕರೆಯಲಾಗುವುದು ಹೊರತು ಭಗವದ್ಗೀತೆಯಲ್ಲಿ ಉಲ್ಲೇಖಿಸಲ್ಪಟ್ಟ ಈ ನಾಮಕ್ಕೆ ಕೆಲವು ಮತಾಚಾರ್ಯರೇ ಅರ್ಥೈಸಿರುವಂತೆ ಗುಂಗುರು ಕೂದಲನ್ನು ಹೊಂದಿದ್ದರಿಂದ ಅರ್ಜುನ ಗುಡಾಕೇಶ ಎನ್ನಿಸಿರುವುದಲ್ಲ. ಅರಗಿನಮನೆಯ ಅಪಾಯದ ಸಂದರ್ಭವನ್ನು ಗಮನಿಸಿದಾಗ ಅರ್ಜುನಿಗಿಂತಲೂ ಭೀಮಸೇನನೇ ಮುಖ್ಯವಾಗಿ ಗುಡಾಕೇಶ ಎನಿಸಿದ್ದ ಎಂಬುದು ತಿಳಿಯುವುದು.

ಪಾಂಡವರ ವಯೋಮಾನದ ಬಗ್ಗೆ, ಎಲ್ಲೆಲ್ಲಿ ಎಷ್ಟೆಷ್ಟು ಕಾಲ ಕಳೆದರು – ಮುಂತಾದ ಮಾಹಿತಿಗಳ ಬಗ್ಗೆ ಬೆಳಕು ಚೆಲ್ಲಿದವರು ಶ್ರೀಮದಾಚಾರ್ಯರು ಮಾತ್ರ. ಆಚಾರ್ಯರು ಅರಗಿನ ಮನೆಯಲ್ಲಿ ಪಾಂಡವರು ಆರುತಿಂಗಳುಗಳ ಕಾಲ ವಾಸವಾಗಿದ್ದರೆಂದು ನಿಖರವಾಗಿ ತಿಳಿಸಿರುವರು.

ಆರು ತಿಂಗಳು ಪ್ರತಿನಿತ್ಯ ಕಾದೂ ಕಾದೂ ಕೊನೆಗೆ ಪುರೋಚನ ತಾನೇ ನಿದ್ರೆ ಮಾಡುವ ಪ್ರಸಂಗ ಬರುತ್ತಿದ್ದಿತು. ಭೀಮಸೇನ ಮಾತ್ರ ಎಂದೂ ನಿದ್ರೆ ಮಾಡಲೇ ಇಲ್ಲ.

ಈ ವಿಚಾರವನ್ನು ಮನವರಿಕೆ ಮಾಡಿಕೊಳ್ಳಬೇಕೆಂದರೆ ನಮ್ಮ ನಮ್ಮ ದೇಹದ ಸ್ಥಿತಿಯನ್ನೊಮ್ಮೆ ಪರಿಶೀಲಿಸಿಕೊಂಡರೂ ಸಾಕು. ನಮ್ಮ ದೇಹವೇ ಒಂದು ಅರಗಿನ ಮನೆ. ಯಾವ ಕ್ಷಣದಲ್ಲಾದರೂ ಬಿದ್ದು ಹೋಗಬಹುದು. ಈ ದೇಹವೆಂಬ ಅರಗಿನ ಮನೆಯಲ್ಲಿ ಇಪ್ಪತ್ನಾಲ್ಕು ತತ್ವಾಭಿಮಾನಿ ದೇವತೆಗಳೂ ಜೀವನೂ ಇರುವರು. ರಾತ್ರಿ ಯುಧಿಷ್ಠಿರಾದಿಗಳಂತೆ ಉಳಿದೆಲ್ಲ ದೇವತೆಗಳು ವಿಶ್ರಾಂತಿಗೊಳಗಾಗುತ್ತಾರೆ. ಸೂರ್ಯ ವಿಶ್ರಾಂತಿಗೊಳಗಾಗುತ್ತಾನೆ ಕಣ್ಣು ಮುಚ್ಚಿಕೊಳ್ಳುತ್ತದೆ. ಇಂದ್ರ ವಿಶ್ರಾಂತಿಗೊಳಗಾಗುತ್ತಾನೆ ಕೈ ತನ್ನ ಕೆಲಸವನ್ನು ನಿಲ್ಲಿಸುತ್ತದೆ.... ಹೀಗೆಯೇ ಆಯಾ ತತ್ತ್ವಾಭಿಮಾನಿಗಳು ವಿಶ್ರಾಂತಿಗೊಳಗಾದಾಗ ಆಯಾ ಇಂದ್ರಿಯಗಳು ತಮ್ಮ ತಮ್ಮ ಚಟುವಟಿಕೆಗಳನ್ನು ನಿಲ್ಲಿಸಿಬಿಡುತ್ತವೆ. ರಾತ್ರಿಕಾಲದಲ್ಲಿ ನಿದ್ರಾವಸ್ಥೆಯಲ್ಲಿ ನಡೆಯುತ್ತಿರುವ ಚಟುವಟಿಕೆ ಎಂದರೆ ಉಸಿರಾಟ ಮಾತ್ರ. ಒಂದುವೇಳೆ ಉಸಿರಾಟವೂ ನಿಂತಿದ್ದರೆ ಅದು ಮರಣಾವಸ್ಥೆ ಎನ್ನಿಸುವುದೇ ಹೊರತು. ನಿದ್ರಾವಸ್ಥೆಯಲ್ಲ. ನಿದ್ರಾವಸ್ಥೆಯಲ್ಲಿ ಜೀವನೂ ವಿಶ್ರಾಂತನಾಗಿರುವುದರಿಂದ ಅವನೂ ಉಸಿರಾಟ ನಡೆಸುವವನಲ್ಲ. ಆಗ ವಾಯುದೇವನು ಮಾತ್ರ ಎಚ್ಚೆತ್ತಿದ್ದು ಜೀವನ ಉಸಿರಾಟವನ್ನು ಎಂದಿನಂತೆ ನಿಯಂತ್ರಿಸುತ್ತಿರುವನು. ಹೀಗೆ ಪ್ರತಿಯೊಬ್ಬರ

ಶರೀರದಲ್ಲಿ ಪ್ರತಿನಿತ್ಯ ರಾತ್ರಿಕಾಲದಲ್ಲೂ ಎಚ್ಚೆತ್ತಿರುವ ವಾಯುದೇವನ ಅವತಾರ ಭೀಮಸೇನನೇ ಅರಗಿನ ಮನೆಯಲ್ಲಿ ಆರು ತಿಂಗಳ ರಾತ್ರಿಕಾಲ ಎಚ್ಚೆತ್ತಿದ್ದುದು. ಅಂದಮೇಲೆ ಇದರಲ್ಲಿ ಅಸಂಭಾವನಾ ಶಂಕೆಗೆ ಅವಕಾಶವೇ ಇಲ್ಲ.

## ಭೀಮನಿಂದ ಅರಗಿನ ಮನೆ ಅಗ್ನಿಗಾಹುತಿ

ಆರು ತಿಂಗಳ ಬಳಿಕ ಒಂದು ರಾತ್ರಿ ಭೀಮಸೇನನೇ ಆ ಅರಗಿನ ಮನೆಗೆ ಬೆಂಕಿ ಇಟ್ಟು ಸುಡುವನು. ಹೀಗೆ ಭೀಮಸೇನನೇ ಸುಡುವುದೆಂದಾಗಿದ್ದರೆ ಆರು ತಿಂಗಳು ಯಾಕೆ ಕಾದನು? ಪುರೋಚನ ನಿದ್ರೆ ಮಾಡಲಿ ಎಂದಲ್ಲ. ಏಕೆಂದರೆ ಪ್ರತಿನಿತ್ಯ ಪುರೋಚನ ನಿದ್ರೆ ಮಾಡುತ್ತಲೇ ಇದ್ದ. ರುದ್ರದೇವನ ವರವೊಂದನ್ನು ಉಳಿಸುವುದಕ್ಕಾಗಿ ಭೀಮಸೇನ ಹಾಗೆ ಕಾಯುತ್ತಿದ್ದನು. ಪುರೋಚನನ ಅಕ್ಕ ಒಬ್ಬ ರಾಕ್ಷಸಿ. ಆಕೆಗೆ ಐದು ಜನ ಮಕ್ಕಳು. ಶಿವನನ್ನು ಕುರಿತು ತಪಸ್ಸು ಮಾಡಿ ಅವನನ್ನು ಒಲಿಸಿಕೊಂಡು ತಾನು ಅದಿತಿ(ದೇವಮಾತೆ) ಆಗಬೇಕೆಂದೂ, ತನ್ನ ಮಕ್ಕಳು ದೇವತೆಗಳಾಗಬೇಕೆಂದೂ ಬೇಡಿಕೊಳ್ಳುವಳು. ಐದೂ ಮಕ್ಕಳಿಂದ ಕೂಡಿ ಒಮ್ಮೆಲೇ ಮರಣಕ್ಕೊಳಗಾಗದಿದ್ದಲ್ಲಿ ಖಂಡಿತಾ ಮುಂದಿನ ಜನ್ಮದಲ್ಲಿ ಅದಿತಿಯಾಗಿ ಹುಟ್ಟುವಿ ಎಂದು ರುದ್ರದೇವ ಅವಳಿಗೆ ವರ ಅನುಗ್ರಹಿಸಿದ್ದ. ಈ ಸೂಕ್ಷ್ಮಪ್ರಮೇಯ ಪೂರ್ಣಪ್ರಜ್ಞನಾಗಿದ್ದ ಭೀಮಸೇನನಿಗೆ ಗೊತ್ತಿತ್ತು. ಪುರೋಚನ ತನ್ನ ನೆರವಿಗಾಗಿ ಅವಳನ್ನೂ ಕರೆಸಿಕೊಳ್ಳುವವನೆಂದೂ ಗೊತ್ತಿತ್ತು. ಭೀಮಸೇನನ ನಿರೀಕ್ಷೆಯಂತೆ ಪುರೋಚನ ಒಮ್ಮೆ ತನ್ನ ಅಕ್ಕನನ್ನು ಕರೆಸುವನು. ತನ್ನ ಐದು ಮಕ್ಕಳುಗಳಿಂದ ಕೂಡಿಕೊಂಡೇ ಅವಳು ಅರಗಿನ ಮನೆಗೆ ಬರುವಳು. ಊರಿಂದ ಬರುವವರು ಉಂಡೆ ಮೊದಲಾದ ತಿನಿಸುಗಳನ್ನು ತರುವ ಪದ್ಧತಿಯಂತೆ ಆಕೆಯೂ ವಿಷಮಿಶ್ರಿತವಾದ ಉಂಡೆಗಳನ್ನು ತಂದಿದ್ದಳು. ಭೀಮಸೇನನು ಅವುಗಳನ್ನು ತಿಂದು ವಿಷದ ಪ್ರಭಾವಕ್ಕೆ ಒಳಗಾದಲ್ಲಿ ಅರಗಿನ ಮನೆಗೆ ಬೆಂಕಿ ಕೊಡುವುದೆಂದು ಅವರ ಯೋಜನೆ. ಅದನ್ನೆಲ್ಲ ಬಲ್ಲ ಭೀಮಸೇನ ಉಳಿದ ಯಾರೂ ತಿನ್ನದಂತೆ ತಾನೇ ಅವಳಿಂದ ಮತ್ತೆ ಮತ್ತೆ ಕೇಳಿ ವಿಷಮಿಶ್ರಿತವಾದ ಉಂಡೆಗಳನ್ನೆಲ್ಲಾ ತಾನೊಬ್ಬನೇ ತಿಂದುಬಿಡುವನು. ಮೇಲ್ನೋಟಕ್ಕೆ ಭೀಮಸೇನ ತಿಮ್ಮಂಡಿಯಂತೆ ತಾನೇ ಎಲ್ಲ ತಿಂಡಿಗಳನ್ನು ತಿಂದ ಎಂದು ಕಾಣುವುದು. ಆದರೆ ಭೀಮಸೇನನ ಉದ್ದೇಶ – ಯುಧಿಷ್ಠಿರಾದಿಗಳು ಆ ವಿಷಮಿಶ್ರಿತ ಲಡ್ಡುಗೆಗಳನ್ನು ತಿಂದಿದ್ದಲ್ಲಿ ಅವರಿಗೆ ಅಪಾಯ ತಪ್ಪುತ್ತಿರಲಿಲ್ಲ. ಆದ್ದರಿಂದ ಅವರನ್ನು ಕಾಪಾಡಲು ಭೀಮನು ಅವನ್ನೆಲ್ಲ ತಾನೇ ತಿಂದುಬಿಡುವನು. ಸಮುದ್ರಮಥನಕಾಲದಲ್ಲಿ ಉದ್ಭವಿಸಿದ್ದ ಕಾಲಕೂಟವನ್ನು

ಕುಡಿದಿದ್ದ ವಾಯುದೇವ, ಈ ಸಂದರ್ಭದಲ್ಲಿ ಧರ್ಮಾದಿಗಳನ್ನು ಪಾಲಿಸಲು ವಿಷದ ಲಡ್ಡುಗಳನ್ನು ಭೀಮಸೇನರೂಪದಿಂದ ಹೀಗೆ ತಿಂದಿರುವನು. ಇದರಿಂದ ಭೀಮಸೇನನ ಕಾರುಣ್ಯ ಸ್ಪಷ್ಟವಾಗುವುದು. ಅಷ್ಟೆಲ್ಲ ವಿಷಮಿಶ್ರಿತವಾದ ಉಂಡೆಗಳನ್ನು ತಿಂದ ಭೀಮನಿಗೆ ಸ್ವಲ್ಪ ಹೊತ್ತಿನಲ್ಲಿಯೇ ಬಾಧೆ ಆಗಿಯೇ ತೀರುವುದೆಂದು ನಿರೀಕ್ಷಿಸಿದ್ದ ಪುರೋಚನ ಹಾಗಾಗದ್ದನ್ನು ಕಂಡು ನಿರಾಶನಾಗಿ ತನ್ನ ಅಕ್ಕ ಹಾಗೂ ಅವಳ ಮಕ್ಕಳಿಂದ ಕೂಡಿಕೊಂಡು ಮದ್ಯಪಾನ ಮಾಡಿ ಮಲಗುವನು. ಆಗ ಭೀಮಸೇನ ಕುಂತಿ ಯುಧಿಷ್ಠಿರಾದಿಗಳನ್ನು ವಿದುರ ತೋಡಿಸಿದ್ದ ಸುರಂಗದ ಮೂಲಕ ಕಳುಹಿಸಿಕೊಟ್ಟು ಅರಗಿನ ಮನೆಗೆ ತಾನೇ ಬೆಂಕಿ ಇಡುವನು. ಅರಗಿನ ಮನೆ ಸುಟ್ಟು ಹೋಗುವುದು. ಜೊತೆಗೆ ಅಲ್ಲಿ ಮಲಗಿದ್ದ ವಿರೋಚನ, ಅವನ ಅಕ್ಕ, ಅವಳ ಐದು ಮಂದಿ ಮಕ್ಕಳೂ ಸುಟ್ಟು ಬೂದಿಯಾಗುವರು.

ಬೆಂಕಿ ಇಟ್ಟು ಸುಡುವ ಪ್ರವೃತ್ತಿ ವಾಯುದೇವನ ಮೂರೂ ಅವತಾರಗಳಲ್ಲೂ ನಡೆದಿದೆ. ಹನುಮದವತಾರದಲ್ಲಿ ಲಂಕೆಯನ್ನು ಸುಟ್ಟಿದ್ದರೆ, ಭೀಮಾವತಾರದಲ್ಲಿ ಅರಗಿನ ಮನೆಯನ್ನು ಸುಡುವರು. ಶ್ರೀಮಧ್ವಾವತಾರದಲ್ಲಿ ದುರ್ಮತಗಳನ್ನು ಸುಡುವರು. ಅದೂ ನೂರಕ್ಕೆ ನೂರು ಪಾಲು ಸುಡುವರು.

ವಾರಣಾವತದ ಜನರೆಲ್ಲ ಐದು ಜನ ಪಾಂಡವರು ಕುಂತಿ ಹಾಗು ಪುರೋಚನ ಇವರೇ ಅರಗಿನ ಮನೆಯೊಳಗೆ ಸಿಲುಕಿ ಸುಟ್ಟು ಸತ್ತರೆಂದೇ ಭಾವಿಸಿದರು.

## ಹಿಡಿಂಬವನದತ್ತ ಭೀಮಸೇನ

ಪಾಂಡವರು ಹಾಗೂ ಕುಂತಿ, ವಿದುರ ತಯಾರು ಮಾಡಿಸಿದ ಸುರಂಗದ ಮೂಲಕ ಹೊರಗೆ ಬರುವರು. ದಟ್ಟ ಅಡವಿ. ಗಾಢವಾದ ಕತ್ತಲು. ಭಯಂಕರ ಕ್ರೂರಮೃಗಗಳು, ಕವಿದು ಬರುತ್ತಿದ್ದ ನಿದ್ರೆ ಇವುಗಳಿಂದಾಗಿ ಯುಧಿಷ್ಠಿರಾದಿಗಳಿಗೆ ಭೀಮನ ವೇಗಕ್ಕೆ ತಕ್ಕಂತೆ ನಡೆಯಲು ಆಗುವುದಿಲ್ಲ. ಕೂಡಲೇ ಭೀಮಸೇನ ನಾಲ್ವರು ಸಹೋದರರನ್ನೂ ತಾಯಿಯನ್ನೂ ಹೊತ್ತುಕೊಂಡು ಮುಂದೆ ಸಾಗುವನು.

ಭೀಮಸೇನ ಐವರನ್ನು ಹೇಗೆ ಹೊತ್ತಿದ್ದನು ಎಂಬುದರ ಚಿತ್ರಣವನ್ನು ಮಹಾಭಾರತ ನೀಡಿದೆ:

**ಸ್ಕಂಧಮಾರೋಪ್ಯ ಜನನೀಂ ಯಮಾವಂಕೇನ ವೀರ್ಯವಾನ್ ।**
**ಪಾರ್ಥೌ ಗೃಹೀತ್ವಾ ಪಾಣಿಭ್ಯಾಂ ಭ್ರಾತರಾ ಸುಮಹಾಬಲಃ ॥**

ತಾಯಿ ಕುಂತಿಯನ್ನು ಹೆಗಲ ಮೇಲೆ ಏರಿಸಿದ್ದನು. ನಕುಲ ಸಹದೇವರು ಆಚೆ ಈಚೆಗಿನ ತೊಡೆಗಳ ಮೇಲೆ, ಧರ್ಮರಾಜ ಅರ್ಜುನರನ್ನು ಎರಡು ಕೈಗಳಲ್ಲಿ ಹಿಡಿದುಕೊಂಡು ಮಹಾಬಲಿಷ್ಠನಾದ ಭೀಮಸೇನ ವೇಗವಾಗಿ ಸಾಗುತ್ತಿದ್ದನು. ಅಡವಿಯಲ್ಲಿ ಅಲ್ಲಲ್ಲಿ ಎದುರಾಗುವ ಬೆಟ್ಟಗಳನ್ನು ದಿಣ್ಣೆಗಳನ್ನು ಪಾದದಿಂದ ಮೆಟ್ಟಿ ಸಮತಟ್ಟಾಗಿಸುತ್ತಿದ್ದ. ಅವನ ಎದೆಯ ಸ್ಪರ್ಶಕ್ಕೊಳಗಾಗಿ ದಾರಿಯ ಮರಗಳೆಲ್ಲ ಉರುಳಿ ಬೀಳುತ್ತಿದ್ದವು. ಹೀಗೆ ದಟ್ಟಾರಣ್ಯದಲ್ಲಿ ರಾತ್ರಿಕಾಲದಲ್ಲೂ ಹೆದ್ದಾರಿಯನ್ನು ನಿರ್ಮಿಸಿಕೊಂಡು, ಐವರನ್ನು ಹೊತ್ತುಕೊಂಡು ವೇಗವಾಗಿ ಹೆಜ್ಜೆಗಳನ್ನಿಡುತ್ತಿದ್ದ ಭೀಮಸೇನನ ಪ್ರಯಾಣದ ವೈಭವ ಪಂಪಭಾರತ, ಕುಮಾರವ್ಯಾಸಭಾರತ – ಮುಂತಾದವುಗಳಲ್ಲಿ ಉಲ್ಲೇಖಗೊಂಡಿಲ್ಲ. ದಾರಿಯಲ್ಲಿ ಗಂಗಾನದಿ ಸಿಗುವುದು. ಅದನ್ನು ದಾಟಲು ದೋಣಿಯ ವ್ಯವಸ್ಥೆಯನ್ನು ವಿದುರ ಕಲ್ಪಿಸಿದ್ದ. ಅದನ್ನು ಬಳಸಿಕೊಂಡು, ಗಂಗಾನದಿಯನ್ನು ದಾಟಿ ದಕ್ಷಿಣದಿಕ್ಕಿಗೆ ಸಾಗುತ್ತಾ ಹಿಡಿಂಬವನವನ್ನು ಪ್ರವೇಶಿಸುವರು. ಭೀಮಸೇನ ಅವರನ್ನೆಲ್ಲ ಹೊತ್ತುಕೊಂಡು ಬಂದರೂ ಅವನಿಗೆ ಏನೂ ಆಯಾಸ ಆಗುವುದಿಲ್ಲ. **'ನಿಸ್ಸೀಮ ಪೌರುಷ ಬಲಸ್ಯ ಕುತಃ ಶ್ರಮೋಽಸ್ಯ'** – ಅಪರಿಮಿತ ಪರಾಕ್ರಮ ಹಾಗೂ ಬಲದಿಂದ ಸಂಪನ್ನನಾದ ಹನೂಮಂತನಿಗೆ ಸಮುದ್ರವನ್ನು ದಾಟುವಾಗ ಮೈನಾಕ ಪರ್ವತದಲ್ಲಿ ವಿಶ್ರಾಂತಿ ತೆಗೆದುಕೊಳ್ಳುವ ಅವಶ್ಯಕತೆಯೇ ಬರಲಿಲ್ಲ – ಎಂದು ಹೇಳಲಾದ ನಿರ್ಣಯವನ್ನು ಇಲ್ಲಿಗೂ ಅನ್ವಯಿಸಿಕೊಳ್ಳಬೇಕು. ಅವರನ್ನೆಲ್ಲ ಹೊತ್ತುಕೊಂಡು ಬಂದ ಭೀಮಸೇನನಿಗೆ ಆಯಾಸ ಇರಲಿಲ್ಲ. ಆದರೆ ಅವನಿಂದ ಹೊರೆಸಿಕೊಳ್ಳಲ್ಪಟ್ಟಿದ್ದ ಯುಧಿಷ್ಠಿರಾದಿಗಳು ಹಾಗೂ ಕುಂತಿ ತುಂಬ ದಣಿದಿದ್ದರು; ತಮಗೆ ನೀರು ಬೇಕೆಂದು ಕೇಳುವರು; ಭೀಮಸೇನ ಆ ಅಪರಿಚಿತ ಕಾಡಿನಲ್ಲಿ ದೂರದ ಸರೋವರದಿಂದ ನೀರನ್ನು ಕಮಲದ ಎಲೆಯಲ್ಲಿ ಹಾಕಿ ಉತ್ತರೀಯದಲ್ಲಿ ತರುವನು. ದಣಿದ ಯುಧಿಷ್ಠಿರಾದಿಗಳೆಲ್ಲ ನಿದ್ರಿಸುತ್ತಿದ್ದರು. ಅವರ ರಕ್ಷಣೆಗಾಗಿ ತಾನು ಎಂದಿನಂತೆ ಎಚ್ಚೆತ್ತು ಕುಳಿತುಕೊಳ್ಳುವನು.

### ಹಿಡಿಂಬ ಸಂಹಾರ – ಹಿಡಿಂಬಾ ಪರಿಣಯ

'ಹಿಡಿಂಬ ವನ' ಎಂದೇ ಪ್ರಸಿದ್ಧವಾಗಿದ್ದ ಆ ಕಾಡಿನಲ್ಲಿ ಹಿಡಿಂಬ ಎಂಬ ಅಸುರ ಇದ್ದ. 'ಹಿಡಿಂಬಾ' ಎಂಬ ತನ್ನ ತಂಗಿಯ ಮೂಲಕ ಮನುಷ್ಯರನ್ನು ತರಿಸಿ ಅವನು ತಿನ್ನುತ್ತಿದ್ದನು. ಪಾಂಡವರು ಆ ಕಾಡನ್ನು ಪ್ರವೇಶಿಸಲು ಅವನಿಗೆ ಮನುಷ್ಯರು ಬಂದಿರುವರೆಂದು ತಿಳಿಯುವುದು. ಅವರನ್ನು ಕೊಂದು ತರಲು ತಂಗಿ

ಹಿಡಿಂಬೆಯನ್ನು ಕಳುಹಿಸುವನು. ಹಿಡಿಂಬೆ ಪಾಂಡವರಲ್ಲಿಗೆ ಬರುವಳು. ಯುಧಿಷ್ಠಿರಾದಿಗಳು ಮಲಗಿದ್ದರೂ; ಭೀಮಸೇನ ಎಚ್ಚೆತ್ತಿದ್ದ. ಅವನನ್ನು ಕಂಡು ಅವನ ಸೌಂದರ್ಯಕ್ಕೆ ಮರುಳಾಗಿ ಬಿಡುವಳು:

**'ರಾಕ್ಷಸೀ ಕಾಮಯಾಮಾಸ ರೂಪೇಣಾಪ್ರತಿಮಂ ಭುವಿ'**

ಭೀಮಸೇನನ ಅಪೂರ್ಯ ಸೌಂದರ್ಯವನ್ನು ಮಹಾಭಾರತ ಹಲವಾರು ಸಂದರ್ಭಗಳಲ್ಲಿ ವಿಶಿಷ್ಟ ರೀತಿಯಲ್ಲಿ ವರ್ಣಿಸಿದೆ.

ಸಾಮಾನ್ಯವಾಗಿ ಅರ್ಜುನ ಸುಂದರ ಎಂದು ಎಲ್ಲರೂ ಒಪ್ಪಿಕೊಳ್ಳುತ್ತಾರೆ. ಆದರೆ ಭೀಮನ ಸೌಂದರ್ಯದ ಬಗ್ಗೆ ಗಮನ ಹರಿಸಿದವರಿಲ್ಲ. ಕುಮಾರವ್ಯಾಸ, ಪಂಪ ಯಾರೂ ಭೀಮನ ಸೌಂದರ್ಯವನ್ನು ಅಷ್ಟಾಗಿ ವರ್ಣಿಸಿದ್ದಿಲ್ಲ. ಭೀಮನ ಸೌಂದರ್ಯವನ್ನು ಅಲ್ಲಲ್ಲಿ ಪ್ರಸ್ತಾಪಿಸಿದ ಒಬ್ಬನೇ ಕವಿ ಎಂದರೆ 'ಭಾಸ'. ಯಕ್ಷಗಾನ, ನಾಟಕ ಮುಂತಾದವುಗಳಲೆಲ್ಲ ಒಬ್ಬ ದೊಡ್ಡ ಹೊಟ್ಟೆಯ, ಅಗಲ ಮೀಸೆಯ ಕುರೂಪಿಯನ್ನೇ ಭೀಮನ ಪಾತ್ರಕ್ಕೆ ಆಯ್ಕೆ ಮಾಡಲಾಗುವುದು. ಅಂದರೆ ಮಹಾಭಾರತದ ಭೀಮಸೇನ ಕುರೂಪಿ ಎಂದೇ ಹೆಚ್ಚಿನವರ ಭ್ರಾಂತಿ. ಹಿಡಿಂಬೆ ಸಾಮಾನ್ಯಳಾದವಳಲ್ಲ, ಸ್ವರ್ಗಲೋಕದ ಸೌಂದರ್ಯಾಭಿಮಾನಿನಿ. ಅಂತಹವಳೂ ಭೀಮಸೇನನನನ್ನು ಕಂಡಾಗ ಅವನ ಬಗ್ಗೆ ಕಾಮನೆಗೆ ಒಳಗಾಗಬೇಕೆಂದರೆ ಅವನ ಸೌಂದರ್ಯವನ್ನು ಊಹಿಸಿಕೊಳ್ಳಬಹುದು.

ತನ್ನ ಪರಿಚಯವನ್ನು ತಿಳಿಸಿದ ಹಿಡಿಂಬೆ ತನ್ನನ್ನು ಮದುವೆ ಮಾಡಿಕೊಳ್ಳಬೇಕೆಂದು ಭೀಮನಲ್ಲಿ ಕೇಳಿಕೊಳ್ಳುವಳು. ಹಿಡಿಂಬಾಸುರನಿಂದ ನಿಮ್ಮನ್ನೆಲ್ಲ ಕಾಪಾಡುತ್ತೇನೆಂದೂ ಅವಳು ತಿಳಿಸುವಳು. ಅಣ್ಣನಿಗೆ ಮದುವೆಯಾಗದೆ, ತಮ್ಮ ಮದುವೆಯಾಗುವುದು ಶಾಸ್ತ್ರ ವಿರುದ್ಧ ವಾದುದರಿಂದ ಯುಧಿಷ್ಠಿರನಿಗೆ ಇನ್ನೂ ಮದುವೆಯಾಗದಿದ್ದುದರಿಂದ ತಾನು ಮದುವೆಯಾಗುವುದಿಲ್ಲ – ಎಂದು ಭೀಮಸೇನ ಉತ್ತರಿಸುವನು. ಅವಳ ರಕ್ಷಣೆಯ ಅವಶ್ಯಕತೆಯಂತೂ ತನಗೆ ಎಂದೂ ಇಲ್ಲ ಎಂದೂ ಅವನು ತಿಳಿಸುವನು. ಹಿಡಿಂಬೆ ತಡ ಮಾಡುತ್ತಿರುವಳೆಂದು ಭಾವಿಸಿ ಹಿಡಿಂಬಾಸುರ ತಾನೇ ಅಲ್ಲಿಗೆ ಬರುವನು. ಕ್ರುದ್ಧನಾದ ಅವನನ್ನು ಸ್ವಲ್ಪ ದೂರ ಎಳೆದುಕೊಂಡು ಹೋಗಿ ಭೀಮಸೇನ ಅವನ ಜೊತೆಗೆ ಕಾದಾಡುವನು. ಹಿಡಿಂಬಾಸುರನ ಕಿರಿಚಾಟದಿಂದ ಯುಧಿಷ್ಠಿರಾದಿಗಳ ನಿದ್ದೆಗೆ ಭಂಗ ಬರಬಾರದೆಂದು ಅವನನ್ನು ದೂರಕ್ಕೆ ಎಳೆದೊಯ್ದು ಭೀಮಸೇನನ ಕಾರುಣ್ಯ ಉಲ್ಲೇಖನಾರ್ಹವಾದುದು. ಹಿಡಿಂಬಾಸುರನಿಗೂ ಭೀಮಸೇನನಿಗೂ ಭಯಂಕರ

ಕಾದಾಟ ನಡೆಯುವುದು. ಏನೂ ಆಯುಧವಿಲ್ಲದೆ ಬರೇ ಬಾಹುಬಲದಿಂದಲೇ ಭೀಮಸೇನ ಹಿಡಿಂಬಾಸುರನನ್ನು ಸಂಹರಿಸುವನು.

ಮಹಾಭಾರತದಲ್ಲಿ ಹೀಗೆ ಉದ್ದಕ್ಕೂ ಅನೇಕತೆರನಾದ ಆಪತ್ತುಗಳಿಂದ ಪಾಂಡವರನ್ನು ಪಾಲಿಸಿದ ಹಿರಿಮೆ ಭೀಮಸೇನನದು.

ಹಿಡಿಂಬೆಯನ್ನು ಮದುವೆಯಾಗಲು ಭೀಮಸೇನ ಒಪ್ಪುವುದಿಲ್ಲ. ಅದಕ್ಕೆ ಕೊಡುವ ಮುಖ್ಯ ಕಾರಣ ತಾನು 'ಪರಿವಿತ್ತಿ' ಆಗಲಾರೆ. ಅಣ್ಣನ ಮದುವೆಯಾಗದೆ ಮದುವೆಯಾಗುವ ತಮ್ಮನನ್ನು 'ಪರಿವಿತ್ತಿ ಎನ್ನುವರು. ಶಾಸ್ತ್ರ ಇದನ್ನು ನಿಷೇಧಿಸಿದೆ. ಹಿಡಿಂಬೆ ಧರ್ಮರಾಜ ಮತ್ತು ಕುಂತಿಯರಲ್ಲೇ ಈ ವಿಚಾರವನ್ನು ಪ್ರಸ್ತಾಪಿಸಿದಾಗ ಅವರಿಬ್ಬರೂ ಹಿಡಿಂಬೆಯನ್ನು ಮದುವೆಯಾಗುವಂತೆ ಭೀಮಸೇನನನ್ನು ಒತ್ತಾಯಿಸುತ್ತಾರೆ. ಆದರೆ ಭೀಮಸೇನ ಒಪ್ಪಿಕೊಳ್ಳುವುದಿಲ್ಲ. 'ನನ್ನ ಮೇಲಿನ ಪ್ರೀತಿಯಿಂದಾಗಿ ನೀವು ಹೀಗೆ ಒತ್ತಾಯಿಸುತ್ತಿರುವಿರೇ ಹೊರತು ಧರ್ಮದ ತಿಳುವಳಿಕೆಯಿಂದಲ್ಲ' ಎನ್ನುವನು ಭೀಮಸೇನ. ಎಷ್ಟೋ ಸಂದರ್ಭಗಳಲ್ಲಿ ವ್ಯಾಮೋಹದಿಂದಾಗಿ ಅದೂ ಕುರುಡು ವ್ಯಾಮೋಹದಿಂದಾಗಿ ಧರ್ಮದ ಉಲ್ಲಂಘನೆ ನಡೆಯುವುದು. **'ಬಾಂಧವಾದಿಮೋಹಜಾಲಸಂವೃತಂ'** ಎಂದಿರುವಂತೆ ಬಾಂಧವ್ಯಮೋಹ ಬಲೆಯಂತೆ ಬೀಸಿ ಧಾರ್ಮಿಕ ಪ್ರಜ್ಞೆಯನ್ನು ಮಸುಕುಗೊಳಿಸುತ್ತದೆ. **'ಗುರೂಕ್ತಮಪಿ ನ ಗ್ರಾಹ್ಯಂ ಯದನರ್ಥೇಽರ್ಥಕಲ್ಪನಮ್'** ಎಂದಿರುವಂತೆ ಅನರ್ಥಕ್ಕೆ ಕಾರಣವಾಗುವಂತಹ ಮಾತು ಹಿರಿಯರ ಮೂಲಕ ಬಂದರೂ ಅದು ಮಾನ್ಯ ಎನ್ನಿಸುವುದಿಲ್ಲ.

ಅನಂತರ ಶ್ರೀವೇದವ್ಯಾಸರು ಕಾಣಿಸಿಕೊಳ್ಳುವರು. ಹಿಡಿಂಬೆಯನ್ನು ಮದುವೆಯಾಗುವಂತೆ ಭೀಮಸೇನನಿಗೆ ತಿಳಿಸುವರು. ಕೂಡಲೇ ಭೀಮಸೇನ ಒಪ್ಪಿಕೊಳ್ಳುವನು. ಯುಧಿಷ್ಠಿರಾದಿಗಳು ವ್ಯಾಮೋಹದಿಂದ ಹೇಳಿದರೆಂದು ಒಪ್ಪಿಕೊಳ್ಳಲಿಲ್ಲ. ಶ್ರೀವೇದವ್ಯಾಸರಾದರೋ ತಿಳುವಳಿಕೆಯಿಂದ ಹೇಳಿರುವರೆಂದು ಅವರ ಹೇಳಿಕೆಯನ್ನು ಭೀಮಸೇನ ಒಪ್ಪಿಕೊಂಡ. ಒಬ್ಬ ರೋಗಿ ಯಾವುದಾದರೊಂದು ವಸ್ತುವನ್ನು ತಿನ್ನಲು ತಂದೆ ತಾಯಿಯರು ಹೇಳಿದರೆ ತಿನ್ನಬೇಕೋ ಬೇಡವೋ ಎಂದು ಸಂದೇಹ ಪಡುವನು. ಆದರೆ ಅದೇ ವೈದ್ಯ ಹೇಳಿಬಿಟ್ಟರೆ ಹಿಂದೆ ಮುಂದೆ ನೋಡದೆ ತಿಂದೇ ಬಿಡುವನು. ವೈದ್ಯನಿಗೆ ಅದನ್ನು ತಿಂದರೆ ಆಗುವ ಒಳಿತು ಕೆಡಕುಗಳ ಪೂರ್ಣಜ್ಞಾನವಿರುವುದು ಎಂಬುದೇ ಅದಕ್ಕೆ ಕಾರಣ. ಅಂತೆಯೇ ಪ್ರಕೃತ ಹಿಡಿಂಬೆ ಯಾರು? ಅವಳಿಗೆ ಭೀಮನ ಸಂಬಂಧದ

ಹಿನ್ನೆಲೆ ಏನು? – ಮುಂತಾದವುಗಳನ್ನು ಬಲ್ಲವರು ಶ್ರೀವೇದವ್ಯಾಸರು ಎಂಬುದು ಭೀಮಸೇನನಿಗೆ ತಿಳಿದಿತ್ತು. ಆದ್ದರಿಂದಲೇ ಅವರ ಆದೇಶಕ್ಕೆ ಮಾನ್ಯತೆ ನೀಡುವನು.

ಹಿಡಿಂಬೆ ಸ್ವರ್ಗಲೋಕದ ಸ್ತ್ರೀ. ಅಮರಾವತಿಯ ಅಭಿಮಾನಿ ದೇವತೆ, ಲಂಕೆಗೆ ಲಂಕಿಣಿ ಇದ್ದಂತೆ. ಶಚಿಯ ಶಾಪಕ್ಕೊಳಗಾಗಿ ರಾಕ್ಷಸಿಯಾಗಿ ಹುಟ್ಟಿ ಬಂದಿರುವಳು. ಈ ರಾಕ್ಷಸಯೋನಿಯಿಂದ ಬಿಡುಗಡೆಯಾಗಬೇಕೆಂದರೆ, ಅಂತಹ 'ಪಾವನತ್ವ' ದೊರಕಬೇಕಾದರೆ 'ಪವನ'ನ ಸಂಬಂಧವಾಗಬೇಕು. ಭಗವಂತ ಹೇಗೆ ರಮಾದೇವಿ ಅಥವಾ ರಮಾದೇವಿಯ ಆವೇಶವಿರುವ ಸ್ತ್ರೀಯರ ಹೊರತಾಗಿ ಬೇರೆ ಸ್ತ್ರೀಯರ ಸಂಪರ್ಕ ಪಡೆಯುವುದಿಲ್ಲವೋ ಅಂತೆಯೇ ವಾಯುದೇವನೂ ಭಾರತಿ, ಅಥವಾ ಅವಳ ಆವೇಶಕ್ಕೊಳಗಾದ ಸ್ತ್ರೀಯರ ಹೊರತಾಗಿ ಇತರ ಸ್ತ್ರೀಯರ ಸಂಪರ್ಕ ಪಡೆಯುವುದಿಲ್ಲ. ಅಂತಹ ವಾಯುದೇವನ ಅವತಾರ ಭೀಮಸೇನನ ಸಂಪರ್ಕ ತನಗೆ ದೊರಕಬೇಕೆಂದು ಹಿಡಿಂಬೆ ಭಾರತಿಯನ್ನು ಕುರಿತು ತಪಸ್ಸು ಮಾಡಿ ಆಕೆಯ ಆವೇಶವನ್ನು ಹೊಂದಿಯೇ ಜನಿಸಿದ್ದಳು. ಈ ಪ್ರಮೇಯ ಭೀಮಸೇನನಿಗೂ ತಿಳಿದಿತ್ತು. ಆದರೆ **'ಏಕಸ್ಯ ಪ್ರತಿಭಾತಂ ತು ಕೃತಕಾನ್ನ ವಿಶಿಷ್ಯತೇ'** ಎಂದಿರುವಂತೆ ತನಗೆ ಗೊತ್ತಿದೆ ಎಂದಾಕ್ಷಣ ಹಾಗೆ ನಡೆದುಕೊಂಡು ಬಿಟ್ಟರೆ ಉಳಿದವರಿಗೆ ಅದರಲ್ಲಿ ವಿಶ್ವಾಸ ಬರಬೇಕೆಂದಿಲ್ಲ. ಧರ್ಮಾಚರಣೆ ಮಾಡುವುದು ಎಷ್ಟು ಮುಖ್ಯವೋ, ಅದು ಆಚರಣೀಯವಾದ ಧರ್ಮ ಎಂದು ರುಜುವಾತುಪಡಿಸಿ ಆಚರಿಸಬೇಕೆಂಬುದೂ ಅಷ್ಟೇ ಮುಖ್ಯ. ವೇದವ್ಯಾಸರು ಹೇಳಿದರೆಂದರೆ ಅವರ ಅನುಷ್ಠಾನಾರ್ಹತೆಯು ಸ್ಪಷ್ಟವಾಗುವುದು. ಅದಕ್ಕಾಗಿ ಭೀಮಸೇನ ವೇದವ್ಯಾಸರು ಹೇಳುವವರೆಗೂ ಸುಮ್ಮನಿದ್ದು, ವೇದವ್ಯಾಸರು ಹೇಳಿದಾಕ್ಷಣ ಒಪ್ಪಿಕೊಳ್ಳುವನು.

## ಭೀಮ – ಭೀಷ್ಮರ ಅಂತರ

ಭೀಮಸೇನ ಭೀಷ್ಮರ ಮೊಮ್ಮಗ. ಆದರೆ ಶ್ರೀವೇದವ್ಯಾಸರ ಈ ಮಾತನ್ನು ಕೂಡಲೇ ಒಪ್ಪಿಕೊಳ್ಳುವ ಮೂಲಕ ಭೀಮಸೇನ ಭೀಷ್ಮರಿಗಿಂತ ತುಂಬ ಎತ್ತರಕ್ಕೆ ಏರುವನು. ಭಗವಂತನ ಮತ್ತೊಂದು ಅವತಾರ ಪರಶುರಾಮ. ಇಷ್ಟು ಮಾತ್ರವಲ್ಲ; ಪರಶುರಾಮ ಭೀಷ್ಮರ ಗುರುಗಳು. ಅಂತಹ ಪರಶುರಾಮ ಹೇಳಿದರೂ ಭೀಷ್ಮ ಅಂಬೆಯನ್ನು ವಿವಾಹವಾಗುವುದಿಲ್ಲ. ಅಂಬೆ ಕ್ಷತ್ರಿಯಕನ್ಯೆಯೇ ಆದರೂ ಭೀಷ್ಮ ಗುರುಗಳ ಮಾತಿಗೆ ಬೆಲೆ ಕೊಟ್ಟಿಲ್ಲ. ಹಿಡಿಂಬೆ ರಾಕ್ಷಸಿ, ಅಂತಹವಳನ್ನು ವಿವಾಹವಾಗು ಎಂದಾಗಲೂ ಗುರುಗಳಾದ ಶ್ರೀವೇದವ್ಯಾಸರ ಮಾತಿಗೆ ಭೀಮ ಮಾನ್ಯತೆ ನೀಡಿದ. ಭೀಷ್ಮ ಬಾಹ್ಯಧರ್ಮದ ಅನುಷ್ಠಾನಕ್ಕೆ ಒತ್ತುಕೊಟ್ಟರೆ ಭೀಮ ಧರ್ಮದ ಅಂತರಂಗಕ್ಕೆ

ಮಹತ್ತ್ವ ಕೊಟ್ಟ. ಆದುದರಿಂದಲೇ ಭೀಷ್ಮರು ಜಾರಿ ಬಿದ್ದಲ್ಲಿ ಭೀಮಸೇನ ಸ್ಥಿರವಾಗಿ ಮೆರೆಯುವನು.

## ಘಟೋತ್ಕಚನ ಜನನ

ಹಿಡಿಂಬೆಯನ್ನು ಮದುವೆಯಾಗಲು ತಿಳಿಸುವ ವೇದವ್ಯಾಸರು ಒಂದು ಮಗು ಹುಟ್ಟುವವರೆಗೆ ಮಾತ್ರ ಹಿಡಿಂಬೆ ಭೀಮಸೇನರ ಪತಿಪತ್ನಿ ಸಂಬಂಧ ಇರಬೇಕಾದದ್ದು; ಮಗು ಹುಟ್ಟಿದ ಕೂಡಲೇ ಹಿಡಿಂಬೆ ಹೊರಟು ಹೋಗಬೇಕು – ಎಂದೂ ತಿಳಿಸಿದ್ದರು. ಅದಕ್ಕನುಗುಣವಾಗಿ ಭೀಮಸೇನ ಆ ಹಿಡಿಂಬವನದಲ್ಲಿಯೇ ಹಿಡಿಂಬೆಯ ಜೊತೆಗೆ ಆರು ತಿಂಗಳು ಇರುವನು. ಆರುತಿಂಗಳಿಗೆ ಹಿಡಿಂಬೆಯಲ್ಲಿ ಒಬ್ಬ ಮಗ ಜನಿಸುವನು. ಪಾಂಡವರಲ್ಲಿ ಯುಧಿಷ್ಠಿರ ದೊಡ್ಡವನಾದರೂ ಮೊದಲು ಮಗನನ್ನು ಪಡೆದವ ಭೀಮಸೇನ. 'ಘಟೋತ್ಕಚ' ಎಂದು ಭೀಮಸೇನನ ಮಗನ ಹೆಸರು. ಹುಟ್ಟುವಾಗ ಅವನ ತಲೆ ಬೋಳಾಗಿದ್ದು, ಅನಂತರದ ಕ್ಷಣದಲ್ಲಿಯೇ ತಲೆತುಂಬ ಕೂದಲು ಬೆಳೆದ್ದದ್ದರಿಂದ ಅವನು 'ಘಟೋತ್ಕಚ' ಎನ್ನಿಸುವನು. ಈ ಹಿನ್ನೆಲೆ ತಿಳಿಯದೆ ಕೆಲವರು ಅವನನ್ನು 'ಘಟೋದ್ಗಜ' ಎಂದು ತಪ್ಪಾಗಿ ಹೆಸರಿಸುವುದುಂಟು . 'ನಿರ್ಋತಿ' ಎಂಬ ದೇವತೆಯೇ ರುದ್ರದೇವರ ಆವೇಶದೊಂದಿಗೆ ಕೂಡಿ 'ಘಟೋತ್ಕಚ'ನಾಗಿ ಹುಟ್ಟಿ ಬಂದಿದ್ದನು. ಶುಕಾಚಾರ್ಯರು ವೇದವ್ಯಾಸರೂಪದ ಪರಮಾತ್ಮನ ಪುತ್ರನಾಗಿ ಹುಟ್ಟಬೇಕಾದರೆ ಹೇಗೆ ಪರಮಾತ್ಮನ ಮೂಲರೂಪದ ಮಗನಾದ ವಾಯುದೇವನ ಆವೇಶವನ್ನು ಹೊಂದಿರಬೇಕಿತ್ತೋ, ಅಂತೆಯೇ ಘಟೋತ್ಕಚ ವಾಯುದೇವನ ಪುತ್ರನಾಗಿ ಹುಟ್ಟಬೇಕಾದರೆ, ವಾಯುದೇವನ ಮೂಲರೂಪದ ಪುತ್ರನಾದ ರುದ್ರನ ಆವೇಶವನ್ನು ಹೊಂದಿರುವುದು ಅವಶ್ಯವಾಗಿತ್ತು ಎಂದು ಭಾವಿಸಬಹುದು.

ವೇದವ್ಯಾಸರು ಮಗು ಹುಟ್ಟಿದಾಕ್ಷಣ ಹೊರಟು ಹೋಗಬೇಕೆಂದು ತಿಳಿಸಿದ್ದರೇನೋ ನಿಜ. ಆದರೆ ಆರು ತಿಂಗಳು ಸಂಬಂಧ ಅಷ್ಟೊಂದು ರೂಢವಾಗುವ ಪ್ರಯುಕ್ತ ಸುಲಭವಾಗಿ ಆ ಸಂಬಂಧವನ್ನು ಕಳಚಿಕೊಳ್ಳಲಾಗುವುದಿಲ್ಲ. ಭೀಮಸೇನನಲ್ಲಿ ಅಷ್ಟೊಂದು ತತ್ತ್ವಜ್ಞಾನ ಇದ್ದ ಪ್ರಯುಕ್ತವಷ್ಟೇ ಅವನು ಹಿಡಿಂಬೆಯನ್ನು ಮಗು ಸಮೇತವಾಗಿ ತತ್‌ಕ್ಷಣ ಕಳುಹಿಸಿಕೊಟ್ಟು ಬಿಡುವನು. ಭೀಮನ ಭಗವದ್ಭಕ್ತಿಯಂತೆ ವಿಷಯವಿರಕ್ತಿಯೂ ಗ‌ ಪ್ರಸಂಗ ನಿರೂಪಿಸುವುದು.

## ಭಿಕ್ಷಾಟನೆಯ ಮರ್ಮ

ಶ್ರೀವೇದವ್ಯಾಸರು ಮತ್ತೆ ಪಾಂಡವರಲ್ಲಿಗೆ ಬರುವರು. ಅವರಿಗೆ ಬ್ರಾಹ್ಮಣವೇಷ ಹಾಕಿಸಿ ಏಕಚಕ್ರನಗರಕ್ಕೆ ಕರೆದೊಯ್ಯುವರು. ಅವರನ್ನು ತಮ್ಮ ಶಿಷ್ಯರೆಂದು ಪರಿಚಯಿಸಿ ಕೊಟ್ಟು ಒಬ್ಬ ಬ್ರಾಹ್ಮಣನ ಮನೆಯಲ್ಲಿ ಅವರಿಗೆ ವಸತಿಯ ವ್ಯವಸ್ಥೆಯನ್ನು ಮಾಡುವರು. **'ಆಯಾಸ್ಯೇ ಕಾಲತಃ'** – ಕಾಲಕ್ರಮೇಣ ಬರುವೆನೆಂದು ತಿಳಿಸಿ ಹೊರಟು ಹೋಗುವರು.

ಬ್ರಾಹ್ಮಣವೇಷದಲ್ಲಿದ್ದ ಪಾಂಡವರು ಏಕಚಕ್ರನಗರದಲ್ಲಿ ಭಿಕ್ಷೆ ಬೇಡಿ ಬದುಕಲು ಪ್ರಾರಂಭಿಸುವರು. ಬ್ರಾಹ್ಮಣರಿಗೆ 'ಮಧುಕರವೃತ್ತಿ' ಯಾಗಿ ಭಿಕ್ಷೆ ಬೇಡುವುದು ವಿಹಿತವೇ. ಆದರೆ ಕ್ಷತ್ರಿಯರಿಗೆ ಅದು ಉಚಿತವಲ್ಲ. ಆಪದ್ಧರ್ಮವಾಗಿ ಮಾತ್ರ ಅದನ್ನು ಕ್ಷತ್ರಿಯರು ಪಾಲಿಸಬಹುದಷ್ಟೇ. ಭೀಮಸೇನನಿಗೆ ಆಪತ್ತೇ ಇಲ್ಲ ಎಂದಮೇಲೆ ಆಪದ್ಧರ್ಮವಾಗಿ ಭಿಕ್ಷೆ ಬೇಡುವುದು ಅವನ ವ್ಯಕ್ತಿತ್ವಕ್ಕೆ ಒಗ್ಗುವುದೇ? ಇಲ್ಲ; ಅವನು ಭಿಕ್ಷೆ ಬೇಡಿಲ್ಲ, ಒಮ್ಮೆ ಕುಂಬಾರನ ಮನೆ ಬೆಂಕಿಯ ಅಪಾಯಕ್ಕೊಳಗಾದಾಗ ಅದರಿಂದ ಪಾರುಮಾಡಲು ಭೀಮಸೇನ ಅವನ ಇಡೀ ಮನೆಯನ್ನು ಎತ್ತಿ ಸುರಕ್ಷಿತಸ್ಥಳದಲ್ಲಿ ಇರಿಸಿದ್ದ. ಆ ಕುಂಬಾರ ಕೃತಜ್ಞತೆಯ ಸಂಕೇತವಾಗಿ ಅವನಿಗೆ ಏನನ್ನಾದರೂ ಕಾಣಿಕೆಯಾಗಿ ಕೊಡಬೇಕೆಂದು ಯೋಚಿಸಿ ತನ್ನ ಮನೆಯಷ್ಟೇ ದೊಡ್ಡ ಗಾತ್ರದ ಮಡಿಕೆಯನ್ನು ಮಾಡಿ, ಅದನ್ನು ಭೀಮಸೇನನಿಗೆ ಅರ್ಪಿಸಿದ್ದನು. ಆ ಮಡಿಕೆಯನ್ನು ಹಿಡಿದುಕೊಂಡು ಹೋಗಿ ಭೀಮಸೇನ 'ಭವತಿ ಭಿಕ್ಷಾಂ ದೇಹಿ' ಎನ್ನದೆ ಹುಂಕಾರ ಮಾಡುತ್ತಿದ್ದ. ಅದಕ್ಕೆ ಬೆದರಿದ ಮನೆಯವರು ಆ ಮಡಿಕೆಗೆ ತಮ್ಮಲ್ಲಿದ್ದದ್ದನ್ನು ತಂದು ಸುರಿಯುತ್ತಿದ್ದರು. ಹಾಗಾದರೆ ಭೀಮಸೇನ ಉಗ್ರಗಾಮಿಯಂತೆ ನಡೆದುಕೊಳ್ಳುತ್ತಿದ್ದ ಎಂದಂತಾಯಿತಲ್ಲವೇ? ಇಲ್ಲ, **'ಕರವದ್ ವೈಶ್ಯತೋಽಗ್ರಹೀತ್'** ರಾಜರು ಕಪ್ಪಕಾಣಿಕೆಗಳನ್ನು ಹೇಗೆ ಜಬರ್ದಸ್ತಿ ಮಾಡಿ ಕಿತ್ತುಕೊಳ್ಳುವರೋ ಅಂತೆಯೇ ಕ್ಷತ್ರಿಯನಾಗಿದ್ದ ಭೀಮಸೇನ ಕಪ್ಪಕಾಣಿಕೆಯ ರೀತಿಯಲ್ಲಿ ಅದನ್ನು ಪಡೆದುಕೊಳ್ಳುತ್ತಿದ್ದನಷ್ಟೇ. ಆದುದರಿಂದಲೇ ಕಪ್ಪ ತೆಗೆದುಕೊಳ್ಳಲು ಅರ್ಹರಾದ ವೈಶ್ಯರ ಮನೆಗಳಲ್ಲಷ್ಟೇ ಹೀಗೆ ವಸೂಲಿ ಮಾಡುತ್ತಿದ್ದ. ಆದರೆ ಧರ್ಮರಾಜ ಯಮನ ಅವತಾರ ಆದರೂ ಯಾವುದೋ ಜನ್ಮದ ಪ್ರಾರಬ್ಧ ಕರ್ಮಕ್ಕನುಗುಣವಾಗಿ ಭಿಕ್ಷೆಬೇಡುತ್ತಿದ್ದ. ಅರ್ಜುನ ಸ್ವರ್ಗಾಧಿಪತಿಯಾದರೂ ಭಿಕ್ಷೆ ಬೇಡಿಯೇ ಬದುಕಿದ್ದ. ಭೀಮಸೇನನ ನಡತೆಯ ಈ ಶೈಲಿಯಿಂದಾಗಿ ಅವನ ಪರಿಚಯ ಆಗುವ ಸಾಧ್ಯತೆ ಇದೆ. ಹಾಗಾಗಬಾರದೆಂದು ಅರ್ಜುನ ಯುಧಿಷ್ಠಿರರು

ಭೀಮಸೇನ ಭಿಕ್ಷೆ ಬೇಡುವುದು ಬೇಡ; ತಾವೇ ಭಿಕ್ಷೆಯಲ್ಲಿ ಅವನಿಗೆ ಪಾಲು ನೀಡುವುದಾಗಿ ತಿಳಿಸುವರು; ಭೀಮಸೇನ ಒಪ್ಪಿಕೊಳ್ಳುವನು.

## ಬಕಾಸುರನ ಸಂಹಾರ

ಒಮ್ಮೆ ಭೀಮಸೇನ ತಾಯಿಯ ಜೊತೆ ಮನೆಯಲ್ಲಿದ್ದ. ಉಳಿದವರೆಲ್ಲ ಭಿಕ್ಷೆಗೆ ಹೋಗಿದ್ದರು. ಅವರ ಆಶ್ರಯ ಕೊಟ್ಟವನ ಮನೆಯಲ್ಲಿ ಅಳುವಿನ ಸದ್ದು ಕೇಳಿಸುವುದು. ಸಾಮಾನ್ಯವಾಗಿ ಅಳುವಿನ ಸದ್ದು ಮೃದು ಹೃದಯದ ಸ್ತ್ರೀಯರಿಗೆ ಕೇಳಿಸುವಂತಹದ್ದು. ಆದರೆ ಈ ಅಳುವಿನ ಸದ್ದು ಕುಂತಿಗಿಂತಲೂ ಮುಂಚೆ ಭೀಮಸೇನನಿಗೆ ಕೇಳಿಸುವುದು. ಕುಂತಿಯಲ್ಲಿ ಅವನು ತಿಳಿಸುವನು –**'ಜಾನೀಹಿ ವಿಪ್ರರುದಿತಂ ಕುತ ಇತ್ಯತಶ್ಚ ಯೋಗ್ಯಂ ವಿಧಾಸ್ಯೇ'** –ಅಮ್ಮ! ಅವರೆಲ್ಲ ಏಕೆ ಅಳುತ್ತಿರುವರೆಂದು ವಿಚಾರಿಸಿಕೊಂಡು ಬಾ ಅದಕ್ಕೆ ಸೂಕ್ತ ಪರಿಹಾರ ನೀಡುವೆ- ಎಂದು. ನಿಜವಾದ ಕ್ಷತ್ರಿಯಧರ್ಮವೇ ಇದು. 'ಕ್ಷತ' – ದುಃಖಿತರಿಗೆ, ಆಪತ್ತಿಗೊಳಗಾದವರಿಗೆ 'ತ್ರಾಣ' – ಯೋಗ್ಯ ರಕ್ಷಣೆ ನೀಡುವಂತಹದ್ದು. ಅಂತಹ ಕ್ಷತ್ರಿಯಧರ್ಮಪಾಲನೆಗೆ ಸದವಕಾಶ ದೊರಕಿತೆಂದು ಭೀಮನಿಗೆ ಆನಂದ.

ಕುಂತಿ ಕೂಡಲೇ ತೆರಳುವಳು. ಮನೆಯ ಹೊರಗೆ ನಿಂತೇ ಒಳಗೆ ನಡೆಯುತ್ತಿದ್ದ ಕೌಟುಂಬಿಕ ಸಮಸ್ಯೆಯ ಸ್ವರೂಪವನ್ನು ಅರ್ಥಮಾಡಿಕೊಳ್ಳುವಳು. ಬಕಾಸುರನಿಗೆ ಏಕಚಕ್ರನಗರದ ಪ್ರತಿಯೊಂದು ಮನೆಯವರೂ ಹದಿಮೂರುವರ್ಷಕ್ಕೆ ಒಂದು ದಿನದಂತೆ ಒಂದು ಗಾಡಿ ಅನ್ನ, ಎತ್ತುಗಳು, ಒಬ್ಬ ವ್ಯಕ್ತಿ – ಇವಿಷ್ಟನ್ನು ಕಪ್ಪದಂತೆ ಕೊಡಬೇಕು. ಇಲ್ಲದಿದ್ದರೆ ಎಲ್ಲರನ್ನೂ ಅವನು ಪೀಡಿಸುವನು. ಆ ದಿನ ಆ ಮನೆಯವರ ಸರದಿ ಒದಗಿತ್ತು. ಗಾಡಿ, ಅನ್ನ, ಎತ್ತು ಎಲ್ಲ ಸಿದ್ಧವಾಗಿತ್ತು ಆದರೆ ಗಾಡಿಯ ಜೊತೆ ಯಾರು ಹೋಗಬೇಕು ಎನ್ನುವುದರ ಬಗ್ಗೆ ಚರ್ಚೆ ನಡೆಯುತ್ತಿತ್ತು. ಮನೆಯ ಯಜಮಾನ, ಅವನ ಪತ್ನಿ, ಮಗಳು – ಇವರಲ್ಲಿ ಪ್ರತಿಯೊಬ್ಬರೂ ತಾವೇ ಹೋಗುವುದು ಉಚಿತವೆಂದು ಸಮರ್ಥಿಸುತ್ತಿದ್ದರು. ಒಂದು ಅಧ್ಯಾಯದಷ್ಟು ವಿಸ್ತಾರವಾಗಿ ನಿರೂಪಿತವಾದ ಈ ಚರ್ಚೆ ಮನೆಯಲ್ಲಿ ಯಜಮಾನ, ಗೃಹಿಣಿ, ಮಗಳು ಇವರ ಪಾತ್ರದ ಮಹತ್ತ್ವದ ಬಗ್ಗೆ ಚೆನ್ನಾಗಿ ಬೆಳಕು ಚೆಲ್ಲುವಂತಹದ್ದು. ನಮ್ಮ ಸಂಸ್ಕೃತಿಯಲ್ಲಿ ಪತ್ನಿಗೆ, ಮಗಳಿಗೆ ಎಷ್ಟು ಮಹತ್ತ್ವವನ್ನು ನೀಡಲಾಗಿದೆ ಎಂಬುದೂ ಈ ಭಾಗದಿಂದ ಸ್ಪಷ್ಟವಾಗಬಲ್ಲದು.

ಹೀಗೆ ತಮ್ಮ ತಮ್ಮ ಕರ್ತವ್ಯ ಹೊಣೆಗಾರಿಕೆಗಳ ಬಗ್ಗೆ ಚರ್ಚೆ ನಡೆಯುತ್ತಿದ್ದಾಗ ಅವರ ಚಿಕ್ಕ ಮಗು ಒಂದು ಹುಲ್ಲು ಕಡ್ಡಿಯನ್ನು ಎತ್ತಿ ತೋರಿಸಿ, 'ಇದರಿಂದ ಆ

ರಾಕ್ಷಸನನ್ನು ನಾನು ಕೊಂದು ಹಾಕುವೆನು' – ಎನ್ನುತ್ತಿರಲು ರಾಕ್ಷಸನ ಸಂಹಾರಕ್ಕೆ ಆ ಮಗುವಿನ ಮಾತು ಶುಭಶಕುನ ಎಂದು ಭಾವಿಸಿದ ಕುಂತಿ ಆ ಮನೆಯ ಒಳಗೆ ಹೊಕ್ಕುವಳು. ಅಳುವಿನ ಕಾರಣವನ್ನು ವಿಚಾರಿಸುವಳು. ಬ್ರಾಹ್ಮಣನು ಬಕಾಸುರನ ಸುದ್ದಿಯನ್ನು ತಿಳಿಸುವನು. ಕೂಡಲೇ ಕುಂತಿ ತನ್ನ ಐವರು ಮಕ್ಕಳಲ್ಲಿ ಯಾರನ್ನಾದರೂ ಒಬ್ಬನನ್ನು ಕಳುಹಿಸಿಕೊಡುವುದಾಗಿ ಹೇಳುವಳು. ನಮಗಾಗಿ ನಿನ್ನ ಮಕ್ಕಳಲ್ಲಿ ಒಬ್ಬನನ್ನು ಆ ರಾಕ್ಷಸನಿಗೆ ಬಲಿ ಕೊಡುವುದು ನನಗೆ ಇಷ್ಟವಿಲ್ಲ ಎನ್ನುವನು ಆ ಬ್ರಾಹ್ಮಣ. ಕುಂತಿ ಹೇಳುವಳು – 'ನನ್ನ ಒಬ್ಬ ಮಗನಲ್ಲಿ ದಿಕ್ಪಾಲಕರಿಗೂ ಸಹಿಸಲು ಅಸಾಧ್ಯವಾದ ವಿದ್ಯೆ, ಬಲಗಳಿವೆ. ಆದ್ದರಿಂದ ಆ ಅಸುರನನ್ನು ಅವನು ಸಂಹಾರ ಮಾಡಿಯೇ ತೀರುವನು'

ಬಕಾಸುರ ಸಾಮಾನ್ಯವಾದ ರಾಕ್ಷಸನಲ್ಲ. ರಾಮಾಯಣ ಕಾಲದ ಅವನು ರಾವಣನ ಮಾವ. ಸಾಮಾನ್ಯವಾಗಿ ಮಾರೀಚ ರಾವಣನ ಮಾವ. ಅವನೇ ಬಕಾಸುರನಾಗಿ ಹುಟ್ಟಿಬಂದದ್ದು ಎಂಬ ಭಾವನೆ ಇದೆ. ಆದರೆ ಹಾಗಲ್ಲ. ಮಾರೀಚ ಒಬ್ಬ ಯಕ್ಷ. ರಾವಣನ ಸಂಬಂಧಿಯೇ ಅಲ್ಲ. ಈ ಬಕಾಸುರ ರಾಮನ ಕಾಲದಿಂದಲೂ ಇದ್ದವನು. ರಾಮನಿಗೆ ಭಯಪಟ್ಟು ಗುಹೆಯೊಂದರಲ್ಲಿ ಅವಿತುಕೊಂಡಿದ್ದ. ಶಿವನ ವರ ಅವನಿಗೆ ಇದ್ದುದರಿಂದಾಗಿ ಜರಾಸಂಧ, ನರಕಾಸುರ, ಭರತಾದಿಗಳಿಗೂ ಅವನನ್ನು ಮಣಿಸಲು ಆಗಿರಲಿಲ್ಲ.

ಇಷ್ಟು ಬಲಶಾಲಿಯಾದ ಕುಂತಿಯ ಪುತ್ರನಿಂದ ಅವನ ನಿಗ್ರಹ ನಡೆಯಬಹುದೆಂದು ಆ ಬ್ರಾಹ್ಮಣ ನಂಬಿದ. ಕುಂತಿ ತಾಯಿಯಾಗಿ ತನ್ನ ಮಗನ ಬಗ್ಗೆ ಹೇಳುತ್ತಿದ್ದಾಳೆಂದ ಮೇಲೆ ಇದನ್ನು ನಂಬಬಹುದು ಎಂದು ಒಪ್ಪಿಕೊಂಡ.

ಕುಂತಿ ಬಂದು ಭೀಮನಲ್ಲಿ ಎಲ್ಲವನ್ನೂ ತಿಳಿಸಿದಾಗ ಅವನು **'ಉದ್ಧರ್ಷ ಆಸ...'** ತುಂಬ ಸಂತುಷ್ಟನಾಗುವನು. ಬ್ರಾಹ್ಮಣನಾದವನಿಗೆ ದುರ್ಮತ ಖಂಡನೆ ಎಷ್ಟು ಅವಶ್ಯ ಕರ್ತವ್ಯವೋ ಅಷ್ಟೇ ಪ್ರಮುಖ ಕರ್ತವ್ಯ ಕ್ಷತ್ರಿಯನಾದವನಿಗೆ ದುಷ್ಟರನ್ನು ನಿಗ್ರಹಿಸುವುದು. ಅಂತಹ ಕರ್ತವ್ಯ ನಿರ್ವಹಣೆಗೆ ಸದವಕಾಶ ದೊರಕಿತೆಂದು ಭೀಮನಿಗೆ ಸಂತೋಷವೋ ಸಂತೋಷ.

ಯುಧಿಷ್ಠಿರಾದಿಗಳು ಭಿಕ್ಷೆ ಬೇಡಿ ಮರಳುವರು. ಭೀಮ ತುಂಬ ಸಂತೋಷದಲ್ಲಿರುವುದನ್ನು ಕಂಡು ಯುಧಿಷ್ಠಿರ ಕುಂತಿಯಲ್ಲಿ ಅದರ ಬಗ್ಗೆ ವಿಚಾರಿಸುವನು. ಕುಂತಿ ಎಲ್ಲ ವಿಷಯವನ್ನು ತಿಳಿಸುವಳು.

ಯುಧಿಷ್ಠಿರ ತೀವ್ರ ಅಸಮಧಾನಕ್ಕೊಳಗಾಗುವನು. ಸ್ವಹಿತಕ್ಕಾಗಿ ಪರಹಿತವನ್ನು ಬದಿಗೆ ಸರಿಸಬೇಕೆಂಬ ನಿಲುವಿಗೆ ಅವನು ಒಳಗಾದ ಕ್ಷಣ ಅದು. ಕುಂತಿಯನ್ನು ಆಕ್ಷೇಪಿಸುವನು– ತಾಯಿ! ಏನು ಮಾಡಿಬಿಟ್ಟೆ! :

**ಯಸ್ಯ ಬಾಹೂ ಸಮಾಶ್ರಿತ್ಯ ಸುಖಂ ಸರ್ವೇ ಶಯಾಮಹೇ ।**

ಯಾವ ಭೀಮನ ತೋಳ್ಬಲವನ್ನು ನಂಬಿ ನಾವೆಲ್ಲ ಸುಖವಾಗಿ ನಿದ್ರಿಸುತ್ತಿರುವೆವೋ ಅಂತಹ ಭೀಮಸೇನನ್ನು ಬಲಿಕೊಡಲು ಸಿದ್ಧಳಾಗಿ ಬಿಟ್ಟೆಯಲ್ಲ! ಯುಧಿಷ್ಠಿರ ಭೀಮಸೇನನ ಬಗ್ಗೆ ಹೇಳಿದ ಮಾತನ್ನು ಪ್ರತಿಯೊಬ್ಬರೂ ಹೇಳಲೇಬೇಕಾದುದು. ವಾಯುದೇವನ ಅನುಗ್ರಹದ ಬಲದಿಂದಲೇ ಪ್ರತಿಯೊಬ್ಬನೂ ಸುಖವಾಗಿ ನಿದ್ರಿಸುವುದು ತಾನೇ? ಹೆಜ್ಜೆ ಹೆಜ್ಜೆಗೆ ಭೀಮಸೇನನ ಆಶ್ರಯದಿಂದಲೇ ತಾವೆಲ್ಲ ಬೇರೆ ಬೇರೆ ಆಪತ್ತಿನಿಂದ ಪಾರಾದುದನ್ನು ಉಲ್ಲೇಖಿಸಿದ ಯುಧಿಷ್ಠಿರ ''ಅಂತಹ ಭೀಮನನ್ನು ರಾಕ್ಷಸನ ಬಳಿಗೆ ಕಳುಹಿಸಿದರೆ ನಮ್ಮ ಗತಿ ಏನು?'' ಎಂದು ಕೇಳುವನು.

ಅದಕ್ಕೆ ಕುಂತಿ ಉತ್ತರಿಸುವಳು – ಯುಧಿಷ್ಠಿರ ನಿನ್ನ ತಮ್ಮನ ಸಾಮರ್ಥ್ಯದ ಪರಿಚಯ ನಿನಗೆ ಇಲ್ಲ. '**ಏಷ ಸ್ವಯಂ ಹಿ ಮರುದೇವ ನರಾತ್ಮಕೋಽಭೂತ್ಕೋ ನಾಮ ಹಂತುಮಿಮಮಾಪ್ತಬಲೋ ಜಗತ್ಸು**' – ಮಂತ್ರಸದೃಶವಾದ ಮಾತು ಇದು. ಸಾಕ್ಷಾತ್ ವಾಯುದೇವನೇ ಮನುಷ್ಯರೂಪದಲ್ಲಿ ಭೀಮಸೇನನಾಗಿರುವನು. ಅಂತಹವನನ್ನು ಕೊಲ್ಲ ಬಲ್ಲ ವ್ಯಕ್ತಿ ಜಗತ್ತಿನಲ್ಲೇ ಯಾರಾದರೂ ಇರಲು ಸಾಧ್ಯವೇ? ಎಲ್ಲರ ಪ್ರಾಣದೇವ ಅವನೇ ಎಂದ ಮೇಲೆ ಅವನ ಪ್ರಾಣವನ್ನು ಯಾರು ತಾನೇ ಅಪಹರಿಸಿಯಾರು? ಭಗವಂತ ಸಮರ್ಥನಾದರೂ 'ಪ್ರಾಣಪ್ರಿಯ'; ಅಂದಮೇಲೆ ಅವನೂ ಆ ಕೆಲಸವನ್ನು ಸರ್ವಥಾ ಮಾಡುವುದಿಲ್ಲ.

''ಭೀಮಸೇನ ಹುಟ್ಟಿ ಹತ್ತು ದಿನಗಳೊಳಗಾಗಿಯೇ ನನ್ನ ಕೈಜಾರಿ ಶತಶೃಂಗ ಪರ್ವತದ ಮೇಲೆ ಬಿದ್ದಾಗೊಮ್ಮೆ ಅವನ ವಿಷಯದಲ್ಲಿ ನಾನು ವ್ಯಥೆಗೊಳಗಾಗಿದ್ದೆ. ಆದರೆ ಆಗ ಅವನು ಶತಶೃಂಗ ಪರ್ವತವನ್ನು ನೂರಾರು ಹೋಳುಗಳಾಗುವಂತೆ ಮಾಡಿದನೆಂದ ಮೇಲೆ ಮುಂದೆಂದೂ ಭೀಮನ ಬಲದ ವಿಷಯದಲ್ಲಿ ಪರಾಕ್ರಮದ ವಿಷಯದಲ್ಲಿ ಸಂದೇಹ ಪಡುವುದಕ್ಕೆ ಅವಕಾಶವೇ ಇಲ್ಲ ಎಂದು ತೀರ್ಮಾನಿಸಿಬಿಟ್ಟೆ'' ಎಂದು ಕುಂತಿ ಭೀಮನ ಬಲದ ಬಗ್ಗೆ ಯುಧಿಷ್ಠಿರನಿಗೆ ವಿಶ್ವಾಸವನ್ನು ಮೂಡಿಸಿ ಸಮಾಧಾನ ಪಡಿಸುವಳು. ಯುಧಿಷ್ಠಿರ ಮುಂದೆ ಎಂದೂ ಭೀಮನ ಬಲದ ಬಗ್ಗೆ ಸಂಶಯವನ್ನೇ ಪಡುವುದಿಲ್ಲ. ಕುಂತಿ ಯುಧಿಷ್ಠಿರಾದಿಗಳಿಗೆ ಭೀಮನ ಬಗೆಗಿದ್ದ

ವಿಶ್ವಾಸ ನಿಶ್ಚಿಂತವಾಗಿ ಬದುಕಲು ಪ್ರೇರಣೆ ನೀಡಿತು. ವಾಯುಜೀವೋತ್ತಮತ್ವವನ್ನು ನಂಬಿದವರಿಗೆ ಜೀವನದಲ್ಲಿ ಹೇಗೆ ಭರವಸೆ ಮೂಡುವುದೆಂಬುದಕ್ಕೆ ಇದು ಉತ್ತಮ ನಿದರ್ಶನ.

ಭೀಮಸೇನ ಬಂಡಿ ಅನ್ನ ಸಹಿತವಾಗಿ ಬಕಾಸುರನಲ್ಲಿಗೆ ಸಾಗುವನು. ಹಾಗೆ ಸಾಗುವಾಗ ಬಂಡಿಯ ಅನ್ನವನ್ನೆಲ್ಲ ಉಣ್ಣುವನು. ಇಷ್ಟು ಮಾತ್ರಕ್ಕೆ ಭೀಮಸೇನ ತಿನ್ನುವ ಚಾಪಲ್ಯಕ್ಕೊಳಗಾದವನೆಂದು ಆರೋಪಿಸಬಾರದು. ಬರೀ ಅನ್ನವನ್ನಲ್ಲ ಅವನು ಈ ಮೊದಲು ಕಾಲಕೂಟವನ್ನೂ ತಿಂದು ಜೀರ್ಣಿಸಿಕೊಂಡವನು ಎಂಬುದನ್ನು ಮರೆಯಬಾರದು. ಅವನು ಬಕಾಸುರನಲ್ಲಿಗೆ ತಲುಪುವ ಮುಂಚೆಯೇ ಆ ಅನ್ನವನ್ನು ತಿಂದು ಮುಗಿಸಲು ತೊಡಗಿದುದರ ಹಿನ್ನೆಲೆಯನ್ನು ಶ್ರೀಮದಾಚಾರ್ಯರು ಹೀಗೆ ಸ್ಪಷ್ಟ ಪಡಿಸಿರುವರು: **'...ಸ್ಪರ್ಶಾತ್ ಪುರೈವ ನರಭಕ್ಷಿತುರತ್ತುಮೈಚ್ಛತ್'** ಆ ಬ್ರಾಹ್ಮಣ ಭೀಮಸೇನನ ವಶಕ್ಕೆ ಬಂಡಿ ಅನ್ನವನ್ನು ನೀಡಿದ್ದನು. ಭೀಮಸೇನ ಕೂಡಲೇ **'ಶ್ರೀಕೃಷ್ಣಾರ್ಪಣಮಸ್ತು'** ಎಂದು ದೇವರಿಗೆ ಸಮರ್ಪಿಸುವನು. ಆದರಿಂದಾಗಿ ಅದು ದೇವರ ನೈವೇದ್ಯವಾಗುವುದು. ದೇವರ ನೈವೇದ್ಯ ದುಷ್ಟರ ಸ್ಪರ್ಶಕ್ಕೊಳಗಾಗಬಾರದು. ಅದಕ್ಕಾಗಿ ಭೀಮಸೇನ ದೇವರ ನೈವೇದ್ಯರೂಪದಲ್ಲಿದ್ದ ಆ ಬಂಡಿ ಅನ್ನವನ್ನು ಬಕಾಸುರನ ಸ್ಪರ್ಶಕ್ಕೊಳಗಾಗಬಾರದೆಂದು ತಾನೇ ಅಷ್ಟು ಅನ್ನವನ್ನು ತಿಂದು ಬಿಡುವನು. ಹೀಗೆ ಬಂಡಿ ಅನ್ನ ತಿಂದುದರ ಹಿನ್ನೆಲೆ ಅದು ದೇವರ ನೈವೇದ್ಯ ಎಂಬ ಗೌರವ ಭಾವನೆಯೇ ಹೊರತು ನಾಲಿಗೆ ಚಾಪಲ್ಯವಲ್ಲ.

ಭೀಮಸೇನನ, ಅವನ ಮೂಲರೂಪದ ವಾಯುದೇವನ ಕೈಗೆ ತಲುಪಿಸಿದರೆ ಅವನು ಹೇಗೆ ದೇವರಿಗೆ ತಲುಪಿಸುವನೆಂಬುದಕ್ಕೆ ಇದೊಂದು ಉತ್ತಮ ದೃಷ್ಟಾಂತ.

ಭೀಮಸೇನ ಅನ್ನವನ್ನು ತಿನ್ನುತ್ತ ತನ್ನಲ್ಲಿಗೆ ಬರುತ್ತಿರುವುದನ್ನು ಕಂಡ ಬಕಾಸುರನಿಗೆ ತುಂಬ ಸಿಟ್ಟು ಬರುವುದು. 'ನನ್ನ ಅನ್ನವನ್ನು ಇವನು ತಿನ್ನುತ್ತಿದ್ದಾನಲ್ಲ' ಎಂದು. ಯಾರದ್ದೋ ವಸ್ತುವನ್ನು ತನ್ನದೆಂದು ಭಾವಿಸುವುದು ಅಸುರ ಲಕ್ಷಣಗಳಲ್ಲೊಂದು;

> **ದಂಭೋ ದರ್ಪೋಽಭಿಮಾನಶ್ಚ ಕ್ರೋಧಃ ಪಾರುಷ್ಯಮೇವ ಚ ।**
> **ಅಜ್ಞಾನಂ ಚಾಭಿಜಾತಸ್ಯ ಪಾರ್ಥ ಸಂಪದಮಾಸುರೀಮ್ ॥** — ಗೀತಾ (16/4)

ಸಿಟ್ಟಿಗೊಳಗಾದ ಬಕಾಸುರ ದೊಡ್ಡ ದೊಡ್ಡ ಮರಗಳನ್ನು, ಬಂಡೆಗಳನ್ನು ಭೀಮನ ಮೇಲೆ ಎಸೆಯುವನು. ಮತ್ತೂ 'ಸ್ವಸ್ಥಚಿತ್ತ'ನಾಗಿ ಉಣ್ಣುತ್ತಲೇ ಇದ್ದ

ಭೀಮಸೇನ ತನ್ನ ಮೇಲೆಸೆದ ವೃಕ್ಷಾದಿಗಳನ್ನು ಎಡಗೈಯಿಂದಲೇ ದೂರಕ್ಕೆ ತಳ್ಳುವನು. ಆ ಪರ್ವತಾದಿಗಳೇ ಭೀಮನ ಸ್ಪರ್ಶಕ್ಕೊಳಗಾಗಿ ಪುಡಿ ಪುಡಿಯಾಗುವುವು. ಭೀಮಸೇನನ ದೇಹಕ್ಕೆ ಮಾತ್ರ ಏನೂ ಹಾನಿ ಆಗುವುದಿಲ್ಲ. ಇದರಿಂದ ಭೀಮ ಉಪನಿಷತ್ತುಗಳಲ್ಲಿ ವರ್ಣಿತವಾಗಿರುವಂತೆ **'ಆಖಣಾಶ್ಮಸಮ'** – ಎಂಬುದನ್ನು ಋಜುವಾತು ಪಡಿಸಿದಂತಾಗುವುದು. ಭೀಮಸೇನ ಭೋಜನವನ್ನು ಪೂರ್ಣವಾಗಿ ಮುಗಿಸಿ, ಕೈತೊಳೆದು ಆಚಮನ ಮಾಡಿ ಮತ್ತೆ ಬಕಾಸುರನನ್ನು ಎದುರಿಸಲು ಸಿದ್ಧನಾಗುವನು. ಆಚಮನ ಭೋಜನ ಯಜ್ಞದ ಅವಭೃಥದಂತೆ ಇರುವಂತಹದ್ದು. ಹಾಗೆ ಆಚಮನ ಮಾಡದಿದ್ದಲ್ಲಿ ಅವಭೃಥವನ್ನೇ ನಡೆಸದ ಯಜ್ಞದಂತೆ ಅದು ಕೆಟ್ಟು ಹೋಗಿ ಬಿಡುವುದು. ಹಾಗಾಗಬಾರದೆಂದು ಯುದ್ಧದ ಪ್ರಸಂಗದಲ್ಲೂ ಬಕನಂತಹ ಶತ್ರು ಸಮೀಪದಲ್ಲೇ ಇರುವಾಗಲೂ ಭೀಮಸೇನ ಭೋಜನೋತ್ತರದಲ್ಲಿ ಆಚಮನ ಮಾಡದೆ ಬಿಟ್ಟಿಲ್ಲ ಎಂಬುದು ಗಮನಾರ್ಹ. ಮಹಾಭಾರತದಲ್ಲಿ **'ವಾರ್ಯುಪಸ್ಪೃಶ್ಯ ಸಂಹೃಷ್ಟಃ...** ಎಂದು ತಿಳಿಸಿರುವುದನ್ನು ಶ್ರೀಮದಾಚಾರ್ಯರು **'ಆಚಮ್ಯ'** – ಎಂದು ಸ್ಪಷ್ಟಪಡಿಸಿರುವರು. ಅನೇಕರು ಮನೆಯಲ್ಲೇ ಭೋಜನ ನಡೆಸಿದಾಗಲೂ ಭೋಜನೋತ್ತರದಲ್ಲಿ ನಿಯತವಾಗಿ ಆಚಮನ ಮಾಡುವ ಅಭ್ಯಾಸ ಹೊಂದಿಲ್ಲ. ದೊಡ್ಡ ದೊಡ್ಡ ಸಮಾರಂಭದಲ್ಲಿ ಆಚಮನಕ್ಕೆ ಬೇಕಾದ ನೀರು ಸಿಕ್ಕಲಿಕ್ಕಿಲ್ಲ ಎಂಬ ಯೋಚನೆಯಿಂದ ಮನೆಯಲ್ಲೂ ಆಚಮನ ಮಾಡದಿರುವುದು ಜನಗಳ ವಿಚಿತ್ರ ಪ್ರವೃತ್ತಿ. ನೀರು ದೊರಕದ ಸಂದರ್ಭದಲ್ಲೂ 'ಶ್ರೋತ್ರಾಚಮನ'ವನ್ನು ಶಾಸ್ತ್ರಕಾರರು ವಿಧಿಸಿರುವುದನ್ನು ಗಮನಿಸಬೇಕು.

ಬಕಾಸುರನ ಜೊತೆ ಸ್ವಲ್ಪ ಕಾದಾಡಿ ಅನಂತರ ಭೀಮಸೇನನು ಅವನನ್ನು ಕೊಲ್ಲುವನು. ಯಾವುದೇ ಆಯುಧವಿಲ್ಲದೆ ಬರೀ ಕೈಗಳಿಂದಲೇ ಕೊಲ್ಲುವವನು ಅಸಹಾಯಶೂರನಾದ ಭೀಮಸೇನ ಹೆಚ್ಚಿನ ರಾಕ್ಷಸರನ್ನೆಲ್ಲ ಬರೀ ಕೈಗಳಿಂದಲೇ ಕೊಂದಿರುವಂತಹದ್ದು. ಭೀಮಸೇನ ಬಕಾಸುರನನ್ನು ಕೊಂದಿರುವ ಶೈಲಿ – **ಆಕ್ರಮ್ಯ ಪಾದಮಪಿ ಪಾದತಲೇನ ತಸ್ಯ ದೋರ್ಭ್ಯಾಂ ಪ್ರಗೃಹ್ಯ ಚ ಪರಂ ವಿದದಾರ ಭೀಮಃ'** – ಬಕಾಸುರನ ಒಂದು ಪಾದವನ್ನು ತನ್ನ ಪಾದದಿಂದ ಗಟ್ಟಿಯಾಗಿ ಅದುಮಿ ಹಿಡಿದುಕೊಂಡು, ಅವನ ಮತ್ತೊಂದು ಪಾದವನ್ನು ತನ್ನೆರಡು ಕೈಗಳಿಂದ ಹಿಡಿದೆಳೆದು ಸೀಳುವನು. ರುದ್ರದೇವನ ವರಬಲದಿಂದ ಕೂಡಿದ್ದ ಅಸುರನನ್ನು ಲೀಲಾಜಾಲವಾಗಿ ಕೊಲ್ಲುವನು. ಸೀಳಲ್ಪಟ್ಟ ಆ ಬಕಾಸುರನ ದೇಹದ ಸೀಳುಗಳನ್ನು

ಪುನಃ ಹಾಗೆಯೇ ಜೋಡಿಸಿ, ಅವನನ್ನು ಗಾಡಿಯಲ್ಲಿಟ್ಟುಕೊಂಡು ಏಕಚಕ್ರನಗರಕ್ಕೆ ತೆರಳುವನು. ಊರ ಹೆಬ್ಬಾಗಿಲಿನಲ್ಲೇ ಬಕಾಸುರನ ಹೆಣವನ್ನು ಇಡುವನು. ಮತ್ತೆ **'ಸ್ನಾತ್ವಾ ಜಗಾಮ'** –ಹೆಣದ ಸ್ಪರ್ಶದಿಂದ ಮೈಲಿಗೆ ಆಗಿದೆ. 'ಪವಮಾನ' ಸದಾಶುದ್ಧ; ಆದರೆ ಲೋಕದ ದೃಷ್ಟಿಯಿಂದ 'ಶವಸ್ಪರ್ಶ' ಮೈಲಿಗೆಗೆ ಕಾರಣ; ಅಂತಹ ಶವಸ್ಪರ್ಶ ಮಾಡಿದವರು ಶುದ್ಧಿಗಾಗಿ ಸ್ನಾನವನ್ನು ಮಾಡಲೇ ಬೇಕು ಎಂಬುದನ್ನು ತೋರಿಸಿಕೊಡಲೆಂದು ಭೀಮಸೇನ ಮಿಂದು ಯುಧಿಷ್ಠಿರಾದಿಗಳ ಬಳಿಗೆ ಹೋಗುವನು.

ಭೀಮಸೇನನ ಆಗಮನವನ್ನು ನಿರೀಕ್ಷಿಸುತ್ತ ಕುಳಿತಿದ್ದ ಯುಧಿಷ್ಠಿರಾದಿಗಳಿಗೆ ಅವನನ್ನು ಕಂಡಾಕ್ಷಣ ತುಂಬ ಸಂತೋಷವಾಗುವುದು. ಭೀಮಸೇನ ಬಕಾಸುರನನ್ನು ಕೊಂದ ಬಗೆಯನ್ನು ತಿಳಿಯಬಯಸುವರು. ಭೀಮಸೇನ ತಾನು ನಡೆಸಿದ ಬಕಾಸುರ ಸಂಹಾರದ ಕಥೆಯನ್ನು ತಾನೇ ಹೇಳುವನು. ತ್ರಿವಿಕ್ರಮಪಂಡಿತರೇ ಮುಂತಾದವರು ಶ್ರೀಮದಾಚಾರ್ಯರ ಬಾಯಿಯಿಂದ ಪಾಠಕೇಳಿದ ಪುಣ್ಯಾತ್ಮರಾದರೆ, ಯುಧಿಷ್ಠಿರಾದಿಗಳು ಭೀಮಸೇನನ ಬಾಯಿಯಿಂದಲೇ ಅವನ ಮಹಿಮೆಯನ್ನು ಕೇಳಿದ ಮಹಾತ್ಮರು. ಭೀಮಸೇನ ತನ್ನ ಮಧ್ವರೂಪದಿಂದ ಮಹಾಭಾರತತಾತ್ಪರ್ಯನಿರ್ಣಯದಲ್ಲಿ ಹೇಗೆ ನಿರೂಪಿಸಿರುವನೋ ಅಂತೆಯೇ ಅವರೆದುರು ಬಕಾಸುರನ ಸಂಹಾರದ ಸಾಹಸವನ್ನು ತಿಳಿಸಿದನೆಂದರ್ಥ.

ಅಂದು ರಾತ್ರಿ ಕಳೆದು, ಬೆಳಗ್ಗೆ ಊರಬಾಗಿಲಲ್ಲಿ ಬಕಾಸುರ ನಿಂತಿರುವುದನ್ನು ಕಂಡು ಊರಜನರೆಲ್ಲ ಓಡಲಿಕ್ಕೆ ಪ್ರಾರಂಭಿಸುವರು. ಆ ದಿನದ ಕಾಣಿಕೆ ಅವನಿಗೆ ತಲುಪದ ಪ್ರಯುಕ್ತ ಅವನು ಊರಿಗೇ ಬಂದಿದ್ದಿರಬಹುದೆಂದು ಅವರು ಭಾವಿಸುವರು. ಆದರೆ ಅವನು ಹಾಗೇ ನಿಂತಿರುವುದನ್ನು, ಅವನ ಮೇಲೆ ಕಾಗೆಗಳೆಲ್ಲ ಕುಳಿತು ಚುಚ್ಚುತ್ತಿರುವುದನ್ನು ಗಮನಿಸಿದ ಬಳಿಕ ಅವರು ತೀರ್ಮಾನಿಸುವರು – ಅದು ಬಕಾಸುರನ ಹೆಣವೇ ಹೊರತು ಬಕಾಸುರನೇ ಅಲ್ಲ ಎಂದು.

ಬಕಾಸುರ ಸತ್ತ ಸಂಗತಿ ತಿಳಿದು ಆ ಊರ ಜನರಿಗೆ ತುಂಬ ಸಂತೋಷವಾಗುವುದು. ಯಾರು ಕೊಂದರು? ಎಂದು ವಿಚಾರಿಸಿದಾಗ, ಹಿಂದಿನ ದಿನ ಬ್ರಾಹ್ಮಣನ ಪರವಾಗಿ ಹೋಗಿದ್ದ ಭೀಮಸೇನನಿಂದಲೇ ಬಕಾಸುರನ ಸಂಹಾರ ನಡೆಯಿತೆಂದು ತಿಳಿಯುವುದು. ಕೋಟಿಗಟ್ಟಲೆ ವರ್ಷಗಳಿಂದ ಏಕಚಕ್ರನಗರಕ್ಕೆ ತೊಂದರೆ ಕೊಡುತ್ತ ಬಂದವ ಬಕಾಸುರ; ರಾಮಾವತಾರದ ಕಾಲಕ್ಕೂ ಕೃಷ್ಣಾವತಾರದ ಕಾಲಕ್ಕೂ ಸಾವಿರಾರು ವರ್ಷಗಳ ಅಂತರ ಎಂದು ಕೆಲವರು

ಭಾವಿಸುವುದುಂಟು. ಆದರೆ ರಾಮಾವತಾರ ಇಪ್ಪತ್ನಾಲ್ಕನೇ ತ್ರೇತಾಯುಗದಲ್ಲಿ ಆಗಿದ್ದರೆ, ಕೃಷ್ಣಾವತಾರ ಇಪ್ಪತ್ತೆಂಟನೇ ದ್ವಾಪರಯುಗದಲ್ಲಿ ಆಗಿದೆ ಎಂದು ಭಾಗವತಪುರಾಣದಲ್ಲಿ ಸ್ಪಷ್ಟವಿದೆ. ಅಂದ ಮೇಲೆ ರಾಮಾಯಣಕಾಲದ ಬಕಾಸುರ ಪಾಂಡವರಕಾಲದವರೆಗೆ ಇದ್ದನೆಂದರೆ ಕೋಟ್ಯಂತರ ವರ್ಷ ಇದ್ದ ಎಂದೇ ಅರ್ಥ. ಹೀಗೆ ತಲತಲಾಂತರಗಳಿಂದ ಪೀಡಿಸುತ್ತಿದ್ದ ದುಷ್ಟನನ್ನು ತೃಪ್ತಿಪಡಿಸುವುದಕ್ಕಾಗಿ ಅನ್ನ ಕೊಟ್ಟು ಕೊಟ್ಟು ಬೇಸತ್ತಿದ್ದ ಏಕಚಕ್ರನಗರದ ಪ್ರಜೆಗಳು ಅವನ ಪೀಡೆಯನ್ನು ತಪ್ಪಿಸಿದ ಭೀಮಸೇನನಿಗೆ ಅನ್ನದ ರಾಶಿ ಕೊಟ್ಟು ಸಮಾರಾಧನೆ ನಡೆಸಬೇಕೆಂದು ತೀರ್ಮಾನಿಸಿ, ಅನ್ನ ತಂದು ಒಪ್ಪಿಸುವರು. ಭೀಮಸೇನ ಆ ಅನ್ನದ ರಾಶಿಯನ್ನು ನರಸಿಂಹದೇವರಿಗೆ ಸಮರ್ಪಿಸುವನು. ಹಿಂದೆ ದೇವರನೈವೇದ್ಯವನ್ನು ತಿನ್ನಲು ಬೇರೆ ಯಾರೂ ಇಲ್ಲ ಎಂದು ತಾನೇ ಎಲ್ಲವನ್ನೂ ತಿಂದಿದ್ದನು. ಆದರೆ ಈಗ ಎಲ್ಲರಿಗೂ ಆ ನೈವೇದ್ಯವನ್ನು ವಿತರಿಸಿ ತಾನೂ ಸ್ವೀಕರಿಸುವನು.

ಏಕಚಕ್ರನಗರದ ಆ ಬ್ರಾಹ್ಮಣ ಭೀಮಸೇನನಿಗೆ ತನ್ನ ಮನೆಯಲ್ಲಿ ಆಶ್ರಯಕೊಟ್ಟದ್ದರಿಂದಾಗಿ, ತಾನು ಮಾತ್ರವಲ್ಲ, ಇಡೀ ಏಕಚಕ್ರನಗರವೇ ಬಕಾಸುರನ ಭಯದಿಂದ ದೂರವಾಗುವಂತೆ ಆಯಿತು. ನಾವು ಕೂಡಾ ಬಕಾಸುರನಂತಹ ಆಸುರೀಶಕ್ತಿಗಳ ಆಕ್ರಮಣಕ್ಕೊಳಗಾಗಬಾರದೆಂದಿದ್ದರೆ, ಭೀಮಸೇನನಿಗೆ, ಅವನ ಮೂಲರೂಪವಾದ ವಾಯುದೇವರಿಗೆ ಆಶ್ರಯ ಕೊಡಬೇಕು. ಅಂದರೆ ಅವರ ಪ್ರತಿಮೆಯನ್ನು ಮನೆಯಲ್ಲಿ ಇಟ್ಟುಕೊಳ್ಳಬೇಕು. ಅದು ಸಾಮಾನ್ಯಪ್ರತಿಮೆಯಾದರೆ ಸಾಲದು; ಉತ್ತಮ ಪ್ರತಿಮೆಯಾಗಿದ್ದಿರಬೇಕು. **'ರೂಪಮನ್ಯದಿವ ಧನ್ಯಮಾತ್ಮನಃ'** ಎಂದಿರುವಂತೆ ಬ್ರಹ್ಮಸೂತ್ರಭಾಷ್ಯವೇ ಮುಂತಾದ ಕೃತಿಗಳನ್ನೊಳಗೊಂಡ 'ಸರ್ವಮೂಲ ಗ್ರಂಥ'ಗಳೇ ಮಧ್ವಾಚಾರ್ಯರ, ಅವರ ಮೂಲರೂಪ ಶ್ರೀವಾಯುದೇವರ ಉತ್ತಮ ಪ್ರತಿಮೆ. ಅದು 'ಸುವರ್ಣ ಪ್ರತಿಮೆ' ಎನಿಸಿದೆ. ಇಂತಹ ಪ್ರತಿಮೆಯನ್ನು ಮನೆಯಲ್ಲಿರಿಸಿಕೊಂಡಾಗ ಆಸುರೀಶಕ್ತಿಗಳ ಆಕ್ರಮಣದಿಂದ, ಪೀಡೆಯಿಂದ ದೂರವಾಗಬಹುದಾಗಿದೆ.

## ಪಾಂಚಾಲದ ಕಡೆಗೆ ಪಯಣ

ಶ್ರೀವೇದವ್ಯಾಸರು ಏಕಚಕ್ರನಗರದಲ್ಲಿ ಪಾಂಡವರನ್ನು ಬಿಟ್ಟು ಹೋಗುವಾಗ 'ಆಯಾಸ್ಯ ಕಾಲತಃ' ಎಂದಿದ್ದರು. ಅದಕ್ಕೆ ಕಾಲಕ್ರಮೇಣ ಬರುವೆ ಎಂಬ ಅರ್ಥದಂತೆಯೇ ಬಕಾಸುರನ ಮರಣದ ಅನಂತರ ಬರುವೆ ಎಂಬ ಅರ್ಥವೂ ಅಭಿಪ್ರೇತ.

ಪಾಂಡವರಲ್ಲಿಗೆ ಬಂದ ವೇದವ್ಯಾಸರು ದ್ರೌಪದಿಯ ಉತ್ಪತ್ತಿಯ ಹಿನ್ನೆಲೆಯನ್ನೆಲ್ಲ ತಿಳಿಸಿ ಅವಳ ಸ್ವಯಂವರದಲ್ಲಿ ಪಾಲ್ಗೊಳ್ಳಲು ಹೇಳುವರು. **'ಮಾಂಗಲ್ಯಮೇತದತುಲಂ ಪ್ರತಿಯಾತ ಶೀಘ್ರಮ್'**– ನಿಮ್ಮ ಪಾಲಿಗೆ ದೊಡ್ಡ ಪ್ರಮಾಣದ ಮಾಂಗಲ್ಯ ಸಂಭವಿಸುವುದು. ಬೇಗ ಅಲ್ಲಿಗೆ ಹೋಗಿ – ಎಂದು ಭವಿಷ್ಯವನ್ನು ಸೂಚ್ಯವಾಗಿ ತಿಳಿಸುವರು.

ಶ್ರೀವೇದವ್ಯಾಸರ ಪ್ರೇರಣಾನುಸಾರವಾಗಿ ಪಾಂಡವರು ದ್ರುಪದನ ಮಗಳ ಸ್ವಯಂವರ ನಡೆಯುವ ಪಾಂಚಾಲ ದೇಶಕ್ಕೆ ಹೊರಡುವರು.

ಅನೇಕ ಬ್ರಾಹ್ಮಣರೂ ಪಾಂಚಾಲ ದೇಶದೆಡೆಗೆ ಸಾಗುತ್ತಿದ್ದರು. ಬ್ರಾಹ್ಮಣರ ಉದ್ದೇಶ ಸ್ವಯಂವರದಲ್ಲಿ ಪಾಲ್ಗೊಳ್ಳುವುದಲ್ಲ, ಸ್ವಯಂವರದ ನಿಮಿತ್ತವಾಗಿ ವ್ಯವಸ್ಥೆಗೊಳಿಸಲಾಗಿರುವ ಭೋಜನದಲ್ಲಿ ಪಾಲ್ಗೊಳ್ಳುವುದಂತಹದು. **'ಪರಮಭೋಜನಮತ್ರ ಸಿದ್ಧ್ಯೇತ್'** – ಪಾಂಚಾಲದಲ್ಲಿ ಭರ್ಜರಿ ಊಟ ದೊರಕುವುದು – ಎಂದೇ ಹೇಳುತ್ತಾ ಬ್ರಾಹ್ಮಣರು ಸಾಗುತ್ತಿದ್ದರೆಂದು ಶ್ರೀಮದಾಚಾರ್ಯರು ಉಲ್ಲೇಖಿಸಿರುವರು.

ಊಟಕ್ಕಾಗಿಯೇ ಸಾಗುತ್ತಿದ್ದ ಒಂದು ದರ್ಜೆಯ ಬ್ರಾಹ್ಮಣರು ಇದ್ದಿರಬಹುದು. ಆದರೆ ಎಲ್ಲ ಬ್ರಾಹ್ಮಣರು ಅಪೇಕ್ಷೆಪಡುತ್ತಿದ್ದ 'ಪರಮ ಭೋಜನ' ಎಂದರೆ ಊಟ ಅಲ್ಲ. **'ಭ್ರಾಜಿಷ್ಣುರ್ಭೋಜನಂ ಭೋಕ್ತಾ..'** ಎಂದು ವಿಷ್ಣು ಸಹಸ್ರನಾಮ ಭೋಜನ ನಾಮದಿಂದ ಉಲ್ಲೇಖಿಸಿರುವ ಪರಮಾತ್ಮನನ್ನು, ಅವನ ಕುರಿತಾದ ವಿಶೇಷ ಜ್ಞಾನವನ್ನು ಬಯಸಿ ಅನೇಕ ಬ್ರಾಹ್ಮಣರು ಅಲ್ಲಿಗೆ ಹೊರಟಿದ್ದರು. ಶ್ರೀಕೃಷ್ಣ ದ್ರೌಪದೀ ಸ್ವಯಂವರಕ್ಕೆ ಬರುವನು. ಅವನ ದರ್ಶನ ರೂಪವಾದ 'ಪರಮಭೋಜನ' ದೊರಕುವುದು. ಇದಕ್ಕಿಂತಲೂ ಹೆಚ್ಚಾಗಿ 'ಸ್ವಯಂವರ' ಅಂದರೆ ಅದರ ಅಂಗವಾಗಿ ಭಗವಂತನ ವಿಷಯಕವಾದ ಕಥೆಗಳೆಲ್ಲ ನಡೆಯುವುವು. ಹಿಂದೆ ಯಜ್ಞಯಾಗಾದಿ ಪ್ರತಿಯೊಂದು ಕರ್ಮವು ಜ್ಞಾನಕಾರ್ಯದಿಂದ ಕೂಡಿಯೇ ಇತ್ತು **'.... ಸರ್ವಂ ಕರ್ಮಾಖಿಲಂ ಪಾರ್ಥ ಜ್ಞಾನೇ ಪರಿಸಮಾಪ್ಯತೇ'** ಎಂದಿರುವಂತೆ ಜ್ಞಾನಕ್ಕೆ ಪೂರಕವಾದಾಗಲೇ ಕರ್ಮಕ್ಕೆ ಸಾರ್ಥಕ್ಯ ಎಂಬ ಭಾವನೆ ದೃಢವಾಗಿತ್ತು. ಹೀಗೆ ವಾದಕಥೆಯ ಮೂಲಕ ಪಡೆದುಕೊಳ್ಳಬಹುದಾದ ಭಗವಂತನ ಜ್ಞಾನವಿಶೇಷವೇ ಉತ್ತಮ ಬ್ರಾಹ್ಮಣರು ಬಯಸುತ್ತಿದ್ದ 'ಪರಮಭೋಜನ'.

## ಪಾಂಡವರ ಪ್ರಯಾಣವೈಖರಿ

ಗಂಗಾನದಿಯ ತೀರದಲ್ಲಿಯೇ ಪಾಂಡವರು ಪಾಂಚಾಲ ದೇಶದ ಕಡೆಗೆ ಪ್ರಯಾಣ ನಡೆಸುತ್ತಿದ್ದರು. ಮುಂದೆ ಅರ್ಜುನ; ಎಲ್ಲರ ಹಿಂದೆ ಭೀಮಸೇನ; ಮಧ್ಯೆ

ಯುಧಿಷ್ಠಿರ, ನಕುಲ, ಸಹದೇವ ಹಾಗೂ ಕುಂತಿ. ಈ ಪ್ರಯಾಣವನ್ನು ಗಮನಿಸಿದರೇ ಸ್ಪಷ್ಟವಾಗುವುದು – ಅರ್ಜುನಿಗಿಂತ ಭೀಮಸೇನನೇ ಹೆಚ್ಚು ಧೈರ್ಯಶಾಲಿ; ಅವರಿಗೆ ಅಧಿಕ ಆಧಾರನಾಗಿದ್ದವ ಎಂದು . ಕಾಡಿನಲ್ಲಿ ಎಲ್ಲರಿಗಿಂತ ಮುಂದೆ ಸಾಗಬೇಕಾದರೆ ಧೈರ್ಯ ಬೇಕು. ಆದರೆ ಎಲ್ಲರಿಗಿಂತ ಹಿಂದೆ ಸಾಗುವವನಿಗೆ ಅವನಿಗಿಂತಲೂ ಹೆಚ್ಚು ಧೈರ್ಯ ಬೇಕು. ಏಕೆಂದರೆ ಮುಂದಿನವನಿಗೇನಾದರೂ ಆದರೆ ಅವನ ರಕ್ಷಣೆಗೆ ಹಿಂದಿನವನು ನೋಡುತ್ತಿರುವನು. ಆದರೆ ಹಿಂದಿನವನಿಗೆ ರಕ್ಷಣೆ ನೀಡುವವರು ಯಾರೂ ಇರುವುದಿಲ್ಲ. ಮಗು ಕತ್ತಲೆ ಕೋಣೆಯೊಳಗೆ ಹೊಕ್ಕಬೇಕಾದರೆ ತಾಯಿ ತನ್ನ ಹಿಂದೆಯೇ ಇರಬೇಕೆಂದು ಈ ದೃಷ್ಟಿಯಿಂದಲೇ ಅಪೇಕ್ಷಿಸುತ್ತಿರುತ್ತದೆ. ಪಾಂಡವರ ಆ ಪ್ರಯಾಣದಲ್ಲಿ ಎಲ್ಲರ ಹಿಂದೆ ಭೀಮಸೇನ ಸಾಗುತ್ತಿದ್ದನೆಂದರೆ ಅರ್ಜುನನಿಗಿಂತಲೂ ಹೆಚ್ಚು ಧೈರ್ಯಶಾಲಿ ಹಾಗೂ ಉಳಿದ ಪಾಂಡವರಿಗೆ ಮುಖ್ಯಾಶ್ರಯ ಅವನೇ ಎಂದು ಸಿದ್ಧವಾಗುವುದು.

ಪಾಂಡವರ ಆ ಪ್ರಯಾಣ ಮೋಕ್ಷಸಾಧನೆಗಾಗಿ ನಡೆಸಬೇಕಾದ ಸಾತ್ವಿಕರ ಬದುಕಿನ ಪ್ರಯಾಣವನ್ನು ಸಂಕೇತಿಸುವಂತಹದ್ದು. ಪಾಂಡವರ ಆ ಪ್ರಯಾಣದ ಮುಖ್ಯ ಉದ್ದೇಶ ದ್ರೌಪದಿಯನ್ನು ಪಡೆಯುವಂತಹದ್ದು. ಸಾತ್ವಿಕರ ಜೀವನದ ಮುಖ್ಯ ಉದ್ದೇಶವೂ ದ್ರೌಪದಿ ಪ್ರತಿನಿಧಿಸುವ ಆಧ್ಯಾತ್ಮಿಕ ವಿದ್ಯೆಯ ಸಂಪಾದನೆಯೇ ಆಗಿರಬೇಕು. ಆ ಪ್ರಯಾಣದಲ್ಲಿ ಅರ್ಜುನ ಮುಂದೆ ಇದ್ದ. ಅರ್ಜುನ ಶ್ರವಣ ಮನನ ನಿಧಿಧ್ಯಾಸನಗಳ ಸಂಕೇತ. ಸಾತ್ವಿಕರ ಬದುಕಿನಲ್ಲೂ ಶಾಸ್ತ್ರಶ್ರವಣಾದಿಗಳಿಗೆ ಆದ್ಯತೆ ಇರಬೇಕು. ಭೀಮಸೇನ ಹಿಂದೆ ಇದ್ದ. ಭೀಮಸೇನ ಸಂಕೇತಿಸುವ ತತ್ತ್ವಜ್ಞಾನ ಸಾತ್ವಿಕರ ಬದುಕಿನ ಪ್ರತಿಯೊಂದು ಚಟುವಟಿಕೆಯ ಹಿನ್ನೆಲೆಯಾಗಿದ್ದಿರಬೇಕು. ಧರ್ಮರಾಜಾದಿಗಳು ಮಧ್ಯದಲ್ಲಿದ್ದಂತೆ, ಅಂತಹ ಧರ್ಮರಾಜ ಸಂಕೇತಿಸುವ ಧರ್ಮ, ನಕುಲ ಸಂಕೇತಿಸುವ ಶೀಲ, ಸಹದೇವ ಸಂಕೇತಿಸುವ ವಿನಯ, ಕುಂತಿ ಸಂಕೇತಿಸುವ ಶಾಸ್ತ್ರ ಬದುಕಿನ ಮಧ್ಯದಲ್ಲಿ, ಜ್ಞಾನದ ಹಿನ್ನಲೆಯಲ್ಲಿ ಇರಬೇಕಾದದ್ದು. ಆ ಪ್ರಯಾಣ ಗಂಗಾನದಿಯ ತೀರದಲ್ಲಿಯೇ ಸಾಗಿತ್ತು.'..**ಗುರುರಾಘವೇಂದ್ರವಾಗ್ದೇವತಾಸರಿದಮುಂ ವಿಮಲೀಕರೋತು**' – ಎಂದಿರುವಂತೆ ರಾಘವೇಂದ್ರರೇ ಮುಂತಾದವರ ಮಾತುಗಳೇ ಗಂಗಾನದಿ. ಇದಕ್ಕಿಂತಲೂ ಮುಖ್ಯವಾಗಿ ಶ್ರೀವೇದವ್ಯಾಸರ ಮಾತು ಗಂಗಾನದಿ. ಸಾತ್ವಿಕರ ಜೀವನ ಪ್ರಯಾಣ ಶ್ರೀವೇದವ್ಯಾಸರ ಹಾಗೂ ಜ್ಞಾನಿಗಳ ಮಾತಿನ ಸಮೀಪದಲ್ಲಿಯೇ ಸಾಗಬೇಕಾದದ್ದು.

ಹೀಗೆ ಸಾಗಿದರಷ್ಟೇ ಪಾಂಡವರಿಗೆ ದ್ರೌಪದಿ ದೊರಕಿದಂತೆ ಅಂತಹ ದ್ರೌಪದಿ ಪ್ರತಿನಿಧಿಸುವ ಸದ್ವಿದ್ಯೆ, ಅದರ ಫಲ ದೊರಕಲು ಸಾಧ್ಯ.

ಆದರೆ ಈಗ ನಮ್ಮ ಪ್ರಯಾಣ ಇದಕ್ಕೆ ಪೂರ್ಣ ವ್ಯತಿರಿಕ್ತವಾಗಿಯೇ ಸಾಗುತ್ತಿದೆ. ಯಾರೋ ಕೆಟ್ಟ ಬಾಬಾಗಳ ದುರ್ಮತಾಚಾರ್ಯರ ಜ್ಞಾನದ ಹಿನ್ನೆಲೆ ನಮ್ಮ ಬದುಕಿಗೆ; ಅದರಲ್ಲಿ ಶ್ರವಣಾದಿಗಳಿಗೆ ಎಡೆಯೇ ಇಲ್ಲ; ಟಿ.ವಿ. ಬಂದ ಮೇಲೆ ಮೊದಲು ಅಲ್ಪಸ್ವಲ್ಪ ಪ್ರಮಾಣದ್ದಲ್ಲಿದ್ದದ್ದೂ ಕಾಣೆಯಾಗಿದೆ. ಅಧರ್ಮ, ಕೆಟ್ಟ ಚಾರಿತ್ರ್ಯ, ಉದ್ಧಟತನಗಳೇ ಜೀವನದಲ್ಲಿ ಮೆರೆಯುತ್ತಿರುವವು. ಗಂಗಾತೀರದ ಬದಲು ಅಶ್ಲೀಲ ಸಾಹಿತ್ಯದ ಕೆಟ್ಟ ಗಟಾರದ ಸಮೀಪದಲ್ಲಿಯೇ ನಮ್ಮ ಪ್ರಯಾಣ ಸಾಗುತ್ತಿದೆ. ಇಂತಹ ಪ್ರಯಾಣದಿಂದ ದ್ರೌಪದಿ ಸಿಗುವುದಾದರೂ ಹೇಗೆ? ಅವಿದ್ಯೆಯ ಕಡೆಗೇ ನಾವು ಸಾಗುತ್ತಿದ್ದೇವೆ; ವಿದ್ಯೆಯೆಡೆಗಲ್ಲ.

## ದ್ರೌಪದೀ ಸ್ವಯಂವರ

ರುಗ್ಮಿಣಿ ಸತ್ಯಭಾಮೆಯರನ್ನು ಬಿಟ್ಟರೆ ದ್ರೌಪದಿ – ಉಳಿದೆಲ್ಲರನ್ನು ಮೀರುವ ಸೌಂದರ್ಯಸಂಪನ್ನಳಾಗಿದ್ದಳು. ವಿದ್ಯೆಯೇ ಮನುಷ್ಯನಿಗೆ ಅತ್ಯಧಿಕ ಶೋಭೆಯನ್ನುಂಟುಮಾಡುವಂತಹದ್ದು. ಅಂದಮೇಲೆ ಅಂತಹ ವಿದ್ಯೆಯ ಸಾಕಾರ ಮೂರ್ತಿ ದ್ರೌಪದಿ ಎಷ್ಟು ಸುಂದರಿಯಾಗಿರಬೇಡ? ಆದುದರಿಂದಲೇ ಅವಳ ಸ್ವಯಂವರಕ್ಕೆ ಆ ಕಾಲದ ಪ್ರತಿಯೊಬ್ಬ ರಾಜರೂ ಬಂದಿದ್ದರು. ತಮಗೆ ದ್ರೌಪದಿ ಸಿಗುವಂತಾಗಲಿ ಎಂಬ ಆಸೆಯಿಂದ.

ಸ್ವಯಂವರದ ಅಂಗವಾಗಿ ಆಯೋಜಿಸಲಾಗಿದ್ದ 'ಮತ್ಸ್ಯಯಂತ್ರ'ವನ್ನು ಭೇದಿಸುವುದರಲ್ಲಿ ಉಳಿದೆಲ್ಲ ರಾಜರು ಅಯಶಸ್ವಿಗಳಾದಾಗ ಭೀಮಾರ್ಜುನರು ಮೇಲೆಳುವರು. ಅರ್ಜುನನೊಬ್ಬನೇ ಮೇಲೇಳುವನೆಂದು ಹೆಚ್ಚಿನವರು ಭಾವಿಸಿರುವರು. ಆದರೆ ಹಾಗಲ್ಲ. ಭೀಮಾರ್ಜುನರಿಬ್ಬರೂ ಏಳುವರು. ಆಗ ಅರ್ಜುನ ಮತ್ಸ್ಯಯಂತ್ರದ ಭೇದನಕ್ಕೆ ತನಗೆ ಅವಕಾಶ ಕೊಡಬೇಕೆಂದು ಭೀಮನಲ್ಲಿ ಪ್ರಾರ್ಥಿಸಿಕೊಳ್ಳುವನು. **'ಶಿಷ್ಯಕೃತಂ ಗುರುಕೃತಂ ಭವತಿ'** – ಶಿಷ್ಯನ ಸಾಧನೆ ಗುರುಗಳ ಲೆಕ್ಕಕ್ಕೆ ಸೇರುವುದೆಂಬ ನ್ಯಾಯಕ್ಕನುಗುಣವಾಗಿ ಶಿಷ್ಯನ ಸ್ಥಾನದಲ್ಲಿರುವ ಅರ್ಜುನ ಅದನ್ನು ಸಾಧಿಸಿ ಬಿಟ್ಟರೆ, ಭೀಮನೂ ಸಾಧಿಸಿದಂತಾಗುವುದು. ಆದರೆ ಭೀಮ ಸಾಧಿಸಿದರೆ ಅರ್ಜುನ ಸಾಧಿಸಿದಂತಾಗುವುದಿಲ್ಲ. ಈ ದೃಷ್ಟಿಯಿಂದ ಭೀಮಸೇನ ಅರ್ಜುನನಿಗೇ ಅವಕಾಶವನ್ನು ಬಿಟ್ಟುಕೊಡುವನು. ಅರ್ಜುನ ಭೀಮನಿಗೆ ನಮಸ್ಕಾರ ಮಾಡುವನು. ಕೃಷ್ಣನೂ ಅಲ್ಲಿ ಇದ್ದ. ಭೀಮನಿಗೆ ನಮಸ್ಕರಿಸಿದ ಅರ್ಜುನನಿಗೆ

ಕೃಷ್ಣನಿಗೂ ನಮಸ್ಕರಿಸಬೇಕೆಂಬ ಪ್ರಜ್ಞೆ ಮೂಡುವುದು. **'ಕೇಶವಮಜಂ ಮನಸಾ ಪ್ರಣಮ್ಯ..'** ಉಳಿದವರಿಗೆ ತಮ್ಮ ಪರಿಚಯ ಆಗಬಾರದೆಂದು ಶ್ರೀಕೃಷ್ಣನನ್ನು ದೈಹಿಕವಾಗಿ ನಮಸ್ಕರಿಸದೆ, ಮನಸ್ಸಿನಿಂದಲೇ ನಮಸ್ಕರಿಸುವನು. **'ಮುಕುಂದಭಕ್ತ್ಯೈ ಗುರುಭಕ್ತಿಜಾಯೈ...'** ಎಂದಿರುವಂತೆ ಭೀಮನಲ್ಲಿ ಮಾಡಿದ ಭಕ್ತಿ ಕೃಷ್ಣನಲ್ಲಿ ಭಕ್ತಿಮಾಡಲು ಪ್ರಚೋದನೆ ನೀಡಿತು. ಜರಾಸಂಧ, ಕರ್ಣ ಮುಂತಾದವರೆಲ್ಲ ಆ ಧನುಸ್ಸನ್ನು ಎಡಗೈಯಿಂದಲೇ ಎತ್ತಲು ತೊಡಗಿದ್ದರು. ಆದರೆ ಅರ್ಜುನ ಬಂದು ಬಲಗೈಯಿಂದ ಮೇಲಕ್ಕೆ ಎತ್ತಿ ಮತ್ಸ್ಯಯಂತ್ರದ ಭೇದನದಲ್ಲಿ ಯಶಸ್ವಿಯಾಗುವನು. ದ್ರೌಪದಿ ಬಂದು ಅರ್ಜುನನ ಕೊರಳಿಗೆ ಮಾಲೆ ಹಾಕುವಳು. ಮತ್ಸ್ಯಯಂತ್ರದ ಭೇದನವನ್ನು ಅರ್ಜುನ ನಡೆಸಿದರೂ ಅವನ ಮೂಲಕ ಅದನ್ನು ನಡೆಸಿದವನು ಭೀಮಸೇನ. ತಾನು ಮಾಡುವುದು; ಅನ್ಯರ ಮೂಲಕ ಮಾಡಿಸುವುದು ಇವೆರಡೂ ಭಗವದ್ಭಕ್ತರ ಲಕ್ಷಣ. ಭೀಮಸೇನ ಜೀವನದುದ್ದಕ್ಕೂ ಇದನ್ನು ನಡೆಸುತ್ತಲೇ ಬಂದಿದ್ದನು. ಅವರು ಪಾಂಡವರು, ಎಂದು ಅಲ್ಲಿ ಪಾಲ್ಗೊಂಡಿದ್ದ ಯಾರಿಗೂ ಗೊತ್ತಿರಲಿಲ್ಲ. ಶ್ರೀಕೃಷ್ಣಪರಮಾತ್ಮನಿಗೆ ಮಾತ್ರ ಗೊತ್ತಿತ್ತು. ಅವನು ಸಾತ್ಯಕಿ ಮತ್ತು ಬಲರಾಮ – ಇವರಿಗೆ ಅರ್ಜುನನನ್ನೂ ಭೀಮಸೇನನನ್ನೂ ಪರಿಚಯಿಸಿ ಕೊಟ್ಟಾಗ ಪಾಂಡವರು ಸತ್ತಿಲ್ಲ ಎಂದು ತಿಳಿದು ತುಂಬ ಸಂತೋಷವಾಗುವುದು. ಶ್ರೀಕೃಷ್ಣ **'ತಾನ್ಯಹಂ ವೇದ ಸರ್ವಾಣಿ ನ ತ್ವಂ ವೇತ್ಥ ಪರಂತಪ'**– ಎಂದು ತನ್ನ ಸರ್ವಜ್ಞತ್ವವನ್ನು ಉದ್ಘೋಷಿಸಿರುವನು. ಅದನ್ನು ಈ ವಿಚಾರದಿಂದಲೂ ಮನವರಿಕೆ ಮಾಡಿಕೊಳ್ಳಬಹುದು. ಉಳಿದೆಲ್ಲರ ದೃಷ್ಟಿಯಲ್ಲಿ ಪಾಂಡವರು ಅರಗಿನ ಮನೆಯ ಅನಾಹುತಕ್ಕೆ ಬಲಿಯಾಗಿ ಸತ್ತವರಾಗಿದ್ದರೆ ಕೃಷ್ಣನಿಗೆ ಮಾತ್ರ ಅವರಿಗೆ ಏನೂ ಆಗಿಲ್ಲ ಎನ್ನುವುದು ಗೊತ್ತಿತ್ತು.

ಇಷ್ಟೇ ಅಲ್ಲ, ದ್ರೌಪದೀ ಸ್ವಯಂವರದಲ್ಲಿ ಭೀಮಾರ್ಜುನರು ಪಾಲ್ಗೊಂಡು ದ್ರೌಪದಿ ಅರ್ಜುನನ ಕೊರಳಿಗೆ ಮಾಲೆ ಹಾಕುವಳೆಂದೂ ಶ್ರೀಕೃಷ್ಣನಿಗೆ ಗೊತ್ತಿತ್ತು; ಆದುದರಿಂದಲೇ ಅವನು ಸ್ವಯಂವರದಲ್ಲಿ ಪಾಲ್ಗೊಳ್ಳುವಾಗಲೇ ಎಲ್ಲ ಯಾದವರಲ್ಲಿ ''ಸ್ವಯಂವರವನ್ನು ನೋಡುವ ದೃಷ್ಟಿಯಿಂದ ಹೋಗುವದೇ ಹೊರತು ಕನ್ಯೆಯನ್ನು ಪಡೆಯುವ ದೃಷ್ಟಿಯಿಂದಲ್ಲ'' ಎಂದು ಮುನ್ನೆಚ್ಚರಿಕೆ ನೀಡಿದ್ದನು. ಆದ್ದರಿಂದ ಬಲರಾಮ, ಪ್ರದ್ಯುಮ್ನ ಮುಂತಾದ ಯಾವ ಯಾದವರೂ ದ್ರೌಪದೀ ಸ್ವಯಂವರದಲ್ಲಿ ಸ್ಪರ್ಧಾಳುಗಳಾಗಿ ಪಾಲ್ಗೊಂಡಿದ್ದಿಲ್ಲ. ಪ್ರದ್ಯುಮ್ನಾದಿಗಳು ಪಾಲ್ಗೊಂಡಿದ್ದರೂ ಅವರೇನೂ ಗೆಲ್ಲುತ್ತಿದ್ದಿಲ್ಲ. ಆದರೆ ಆ

ಪ್ರಯುಕ್ತ ಅವರಿಗೆ ಅಪಯಶಸ್ಸು ಬರುತ್ತಿತ್ತು. ಅದನ್ನು ತಪ್ಪಿಸುವುದಕ್ಕೋಸ್ಕರ ಕೃಷ್ಣ ಅವರಿಗೆ ಮೊದಲೇ ಪಾಲ್ಗೊಳ್ಳದಂತೆ ತಿಳಿಸಿದ್ದನು. ಭಕ್ತರ ಮೂಲಕ ಒಳ್ಳೊಳ್ಳೆಯ ಸಾಧನೆಗಳನ್ನು ನಡೆಸಿ, ಆ ಮೂಲಕ ಅವರಿಗೆ ಕೀರ್ತಿ ಬರುವಂತೆ ಮಾಡುವುದು ಒಂದು ಬಗೆಯದಾದರೆ, ಭಕ್ತರ ಮೂಲಕ ಕೆಟ್ಟ ಸಾಧನೆ ನಡೆಯದಂತೆ ಮಾಡುವ ಮೂಲಕ ಆ ಪ್ರಯುಕ್ತ ಅವರಿಗೆ ಅಪಕೀರ್ತಿ ಬರದಂತೆ ತಡೆಯುವುದು ಭಗವಂತನ ಮತ್ತೊಂದು ಬಗೆ.

## ಭೀಮನ ಸಮರ ವೈಖರಿ

ದ್ರುಪದರಾಜ ಬ್ರಾಹ್ಮಣರನ್ನು ಮೇಲೆತ್ತಿಕಟ್ಟಿ ಕ್ಷತ್ರಿಯರಿಗೆ ಅವಮಾನ ಮಾಡುತ್ತಿದ್ದಾನೆಂದು ಆರೋಪಿಸಿ ಅಲ್ಲಿ ನೆರೆದಿದ್ದ ದುರ್ಯೋಧನ, ಶಲ್ಯ – ಮುಂತಾದ ಎಲ್ಲ ರಾಜರು ದ್ರುಪದನ ವಿರುದ್ಧ ಕಾದಾಡಲು ತೊಡಗುವರು. ಅವರೆಲ್ಲರನ್ನು ಎದುರಿಸಲು ಮುಂದೆ ಬರುವವನು ಭೀಮ :

**ಭೀಮಸ್ತು ರಾಜಸಮಿತಿಂ ಪ್ರತಿಸಂಪ್ರಯಾತಾಂ ದೃಷ್ಟ್ವೈವ ಯೋಜನಶತೋಚ್ಛ್ರಯಮಾಶು ವೃಕ್ಷಮ್।**
**ಆರುಜ್ಯ ಸರ್ವನೃಪತೀನಭಿತೋಽಪ್ಯತಿಷ್ಠತ್ ದೃಷ್ಟ್ವಾ ಪಲಾಯನಪರಾಶ್ಚ ಬಭೂವುರೇತೇ॥**

ಬಹುಯೋಜನ ಎತ್ತರದ ಮರವನ್ನು ಕಿತ್ತು ಯುದ್ಧಕ್ಕೆ ಬಂದಿರುವ ರಾಜರೆದುರು ಭೀಮ ನಿಲ್ಲುವನು; ಅವನನ್ನು ಕಂಡೇ ಆ ರಾಜರೆಲ್ಲ ಓಡುವರು. ಮರವನ್ನು ಅವರ ಮೇಲೆ ಪ್ರಯೋಗಿಸುವ ಪ್ರಸಂಗವೇ ಬರಲಿಲ್ಲ.

ರಾಜರೆಲ್ಲ ಬಂದಾಗ ಭೀಮಸೇನ ಮರವನ್ನು ಎತ್ತಿ ಹಿಡಿದು ಅವರನ್ನೆಲ್ಲ ಓಡಿಸಿದ ಎಂಬ ಬಾಹುಯುದ್ಧಕ್ಕೆ ಸಂಬಂಧಿಸಿದ ಈ ನಿರೂಪಣೆ ಅಂತರಾರ್ಥವನ್ನು ಹೊಂದಿದೆ. ಬಾಹುಯುದ್ಧದಂತೆ ಮತ್ತೊಂದು ಯುದ್ಧ ವಾಗ್‌ಯುದ್ಧ, ವಾಗ್‌ಯುದ್ಧದಲ್ಲಿ ಪ್ರತಿವಾದಿಗಳು ಪ್ರಶ್ನೆ ಮಾಡಿದಾಗ **'ಪೃಷ್ಟೇನಾಗಮ ಏವಾದೌ ವಕ್ತವ್ಯಃ ಸಾಧ್ಯಸಿದ್ಧಯೇ.....'** ಎಂಬುದಾಗಿ ಕಥಾಲಕ್ಷಣದಲ್ಲಿ ತಿಳಿಸಿರುವಂತೆ ಆಗಮದ ಆಧಾರವನ್ನಿತ್ತು ಪ್ರತಿವಾದಿಗಳ ಪ್ರಶ್ನೆಗಳನ್ನು ದೂರ ಮಾಡಬೇಕು. ಭೀಮಸೇನ ಜರಾಸಂಧಾದಿಗಳ ಜೊತೆಗೆ ವಾಗ್‌ಯುದ್ಧ ನಡೆಸಿದಾಗ ಹಾಗೆಯೇ ಮಾಡಿ ಅವರೆಲ್ಲರನ್ನು ನಿರುತ್ತರರನ್ನಾಗಿಸುತ್ತಿದ್ದನು. **'ನಿಗಮಕಲ್ಪತರೋರ್ಗಲಿತಂ ಫಲಂ'** ಎಂದಿರುವಂತೆ ವೇದವೇ ಅಂತಹ ವೃಕ್ಷ. ಆದುದರಿಂದ ಮರವನ್ನು ಎತ್ತಿ ಹಿಡಿದು ಪರರನ್ನು ಓಡಿಸುವುದೆಂದರೆ ಆಗಮವನ್ನು ಉಲ್ಲೇಖಿಸಿ ಪರವಾದಿಗಳನ್ನು ನಿರುತ್ತರರನ್ನಾಗಿಸುವುದು ಎಂದು ಭಾವ. ಬಾಹುಯುದ್ಧದ ಅವನ ಶೈಲಿ ವಾಗ್‌ಯುದ್ಧದ ಶೈಲಿಯನ್ನು ಜ್ಞಾಪಿಸುವಂತಹದು.

ಹೀಗೆ '**ಗಮನಾಸನಸಂಕಥಾದಿಲೀಲಾಃ ಸ್ಮೃತಿಮಾತ್ರೇಣ ಭವಾಪವರ್ಗದಾತ್ರೀಃ** । ಎಂದಿರುವಂತೆ ನಡೆಯುವುದು, ಕುಳಿತುಕೊಳ್ಳುವುದು, ಮಾತನಾಡುವುದು – ಮುಂತಾದ ಶ್ರೀಮಧ್ವರ ಪ್ರತಿಯೊಂದು ಚಟುವಟಿಕೆಯೂ ಸ್ಮರಣಮಾತ್ರದಿಂದ ಮೋಕ್ಷ ನೀಡುವಷ್ಟು ಪರಿಪೂರ್ಣವಾಗಿತ್ತು. ಅದರಂತೆಯೇ ಶ್ರೀಹನುಮದವತಾರದ ಹಾಗೂ ಭೀಮಾವತಾರದ ಚಟುವಟಿಕೆಗಳೂ.

ಶಲ್ಯರಾಜ ಭೀಮಸೇನನ ವಿರುದ್ಧ ಕಾದಾಡಲಿಕ್ಕೆ ಬಂದಾಗ ಭೀಮಸೇನ ಅವನನ್ನು ಚೆಂಡಿನಂತೆ ಆಕಾಶಕ್ಕೆ ಎಸೆದು ಬಿಡುವನು. ಶಲ್ಯರಾಜ ಸಾಮಾನ್ಯನಾದವನಲ್ಲ. ಅವನ ಪೂರ್ಣ ಹೆಸರು '**ಅಖಿಲಶತ್ರುಶಲ್ಯಃ**' ಎಲ್ಲ ಶತ್ರುಗಳಿಗೆ ಶಲ್ಯ ಆಯುಧದಂತೆ ಪರಾಕ್ರಮಿಯಾದವನು. ತುಂಬ ಬಲಾಢ್ಯ. ಮುಂದೆ ದುರ್ಯೋಧನ ಆ ಕಾಲದಲ್ಲಿ ಭೂಮಿಯಲ್ಲಿದ್ದ ಬಲಾಢ್ಯರನ್ನು ಉಲ್ಲೇಖಿಸುವಾಗ -

**ಭೀಮಶ್ಚ ಬಲಭದ್ರಶ್ಚ ಮದ್ರರಾಜಶ್ಚ ವೀರ್ಯವಾನ್ ।**
**ಚತುರ್ಥಃ ಕೀಚಕಶ್ಚೈವ ಪಂಚಮಂ ನಾನುಶುಶ್ರುಮಃ ॥**

– ಎಂಬುದಾಗಿ ಹೆಸರಿಸಿರುವನು. ಅಂತಹ ಶಲ್ಯನನ್ನು ಭೀಮಸೇನ ಮೇಲಕ್ಕೆ ಎತ್ತೆಸೆದು, ಇನ್ನೇನು ಅವನು ಕೆಳಗೆ ಬೀಳುವನು ಎನ್ನುವಾಗ ಅವನನ್ನು ಹಿಡಿಯುವನು. '**ಬಂಧುತೋ ಭುವಿ ಶನೈರದಧಾತ್..**' ಶಲ್ಯರಾಜ ಬಂಧು ಎಂಬ ದೃಷ್ಟಿಯಿಂದ ಅವನನ್ನು ನಿಧಾನವಾಗಿ ಭೂಮಿಯ ಮೇಲೆ ಇಡುವನು. ಭೀಮಸೇನನ ಚಿಕ್ಕಮ್ಮ ಮಾದ್ರಿಯ ಸಹೋದರನಾದ ಶಲ್ಯರಾಜ, ಭೀಮಸೇನನಿಗೆ ಮಾವ ಎನಿಸುವನು. ಆದರೆ ಭೀಮ ಇಂತಹ ಲೌಕಿಕ ಬಾಂಧವ್ಯವನ್ನು ಪರಿಗಣಿಸುವವನಲ್ಲ. '**ಬಾಂಧವಾ ವಿಷ್ಣು ಭಕ್ತಾಶ್ಚ..**' ಎಂದಿರುವಂತೆ ಭಗವದ್ಭಕ್ತರನ್ನು ತನ್ನ ಬಂಧುಗಳೆಂದು ಪರಿಗಣಿಸುವನು. ಶಲ್ಯರಾಜ ಸಹ್ಲಾದನ ಅವತಾರ. ಪ್ರಹ್ಲಾದನ ತಮ್ಮನಾದ ಸಹ್ಲಾದ ತನ್ನ ಅಣ್ಣನಂತೆಯೇ ಭಗವದ್ಭಕ್ತ. ಭೀಮಸೇನನಿಗೆ ಶಲ್ಯರಾಜನ ಮೇಲೆ ಬಾಂಧವ್ಯ ಪ್ರಜ್ಞೆ ಈ ಬಗೆಯದು.

## ದ್ರೌಪದಿಯ ಪಂಚಪತಿತ್ವದ ಆಂತರ್ಯ

ದ್ರೌಪದಿಯ ಸ್ವರೂಪವನ್ನು ತಿಳಿದರಷ್ಟೇ ಅವಳನ್ನು ಐದು ಮಂದಿ ಪಾಂಡವರು ವಿವಾಹವಾದ ಔಚಿತ್ಯ ಸ್ಪಷ್ಟವಾಗುವುದು, ದ್ರೌಪದಿಯು ವಾಯುಪತ್ನಿ ಭಾರತಿಯ ಅವತಾರ. ದ್ರೌಪದಿಯ ದೇಹದಲ್ಲಿ **ಭಾರತಿಯ ಜೊತೆಗೆ ಶಚೀ, ಶ್ಯಾಮಲಾ, ಉಷಾ ಹಾಗೂ ಪಾರ್ವತಿ** – ಈ ನಾಲ್ವರು ದೇವಿಯರೂ ಇರುವರು.

ಒಂದು ಶಾಪಕ್ಕೊಳಗಾದ ಶಚೀ ಮುಂತಾದ ದೇವಿಯರು ಆ ಶಾಪದ ಬಿಡುಗಡೆಗಾಗಿ ವಾಯುದೇವರ ಸ್ಪರ್ಶ ಪಡೆಯಬೇಕಿತ್ತು. ಆದರೆ ಪರಮಾತ್ಮ ಲಕ್ಷ್ಮೀದೇವಿಯನ್ನು ಬಿಟ್ಟು ಹೇಗೆ ಉಳಿದ ಸ್ತ್ರೀಯರ ಸ್ಪರ್ಶ ಮಾಡುವುದಿಲ್ಲವೋ ಅಂತೆಯೇ ವಾಯುದೇವರು ಭಾರತಿಯನ್ನು ಬಿಟ್ಟು ಉಳಿದ ಸ್ತ್ರೀಯರ ಸ್ಪರ್ಶ ಮಾಡುವುದಿಲ್ಲ. ಅದಕ್ಕಾಗಿ ಶಚ್ಯಾದಿಗಳು ಬಂದು ಭಾರತಿಯಲ್ಲಿ ತಪಸ್ಸು ಮಾಡಿ, ಭಾರತಿಯ ಜೊತೆಗೆ ದ್ರೌಪದಿಯ ದೇಹದಲ್ಲಿ ಸೇರಿಕೊಂಡು ಅವತರಿಸಿರುವರು. ಹೀಗೆ ದ್ರೌಪದಿಯ ದೇಹದಲ್ಲಿದ್ದ ಭಾರತಿ ಭೀಮನ ಪತ್ನಿಯಾಗಿದ್ದರೆ, ಶ್ಯಾಮಲಾ, ಯಮದೇವನ ಪತ್ನಿ; ಶಚಿ ಅರ್ಜುನನ ಪತ್ನಿ; ಉಷಾ ಅಶ್ವಿನೀದೇವತೆಗಳ ಪತ್ನಿ; ಮತ್ತೊಂದು ಶಾಪದಿಂದ ಪಾರ್ವತಿಗೆ ಅಶ್ವತ್ಥಾಮಾಚಾರ್ಯರ ಸಂಪರ್ಕ ಆಗಿಲ್ಲ . ಅದಕ್ಕೇ ಅಶ್ವತ್ಥಾಮರು ಬ್ರಹ್ಮಚಾರಿಗಳಾಗಿಯೇ ಉಳಿಯುವರು.

ಅಂತೂ ದ್ರೌಪದಿಯನ್ನು ಪಂಚಪಾಂಡವರು ವಿವಾಹವಾದರೆಂದರೆ, ಅನಾಗರಿಕತೆಯ ಲಕ್ಷಣವಾಗಿ ಒಬ್ಬ ಹೆಂಗಸು ಐದು ಗಂಡಸರ ಪತ್ನಿಯಾಗಿದ್ದಳೆಂದು ಭಾವಿಸಬಾರದು.

ಈ ಪ್ರಮೇಯ ಮಹಾಭಾರತದಲ್ಲಿಯೇ ಬಂದಿದೆ. ದ್ರೌಪದಿಯನ್ನು ಪಂಚಪಾಂಡವರು ವಿವಾಹವಾಗುವರೆಂದಾಗ ದ್ರುಪದರಾಜ ಈ ಬಗ್ಗೆ ಸಂಶಯ ಪಡುವನು. ಆಗ ವೇದವ್ಯಾಸರು ಬಂದು ದ್ರೌಪದಿಯ ಸ್ವರೂಪವನ್ನು ಅವನಿಗೆ ಪರಿಚಯ ಮಾಡಿ ಕೊಡುವರು. ಆದರೂ ಅವನಿಗೆ ಪೂರ್ಣ ತೃಪ್ತಿಯಾಗುವುದಿಲ್ಲ. ಎಂದಾಗ, ದ್ರುಪದರಾಜನಿಗೆ ದಿವ್ಯದೃಷ್ಟಿ ಕೊಟ್ಟು ಯುಧಿಷ್ಠಿರಾದಿಗಳ ಮೂಲ ಸ್ವರೂಪವನ್ನೂ, ದ್ರೌಪದೀ ದೇಹದಲ್ಲಿರುವ ಅವರವರ ಪತ್ನಿಯರನ್ನೂ ತೋರಿಸಿ ಕೊಡುವರು. ಆಮೇಲೆ ದ್ರುಪದರಾಜ ತನ್ನ ಮಗಳನ್ನು ಪಂಚಪಾಂಡವರೂ ವಿವಾಹವಾಗುವುದಕ್ಕೆ ಪೂರ್ಣ ಮನಸ್ಸಿನಿಂದ ಒಪ್ಪಿದ. ಹೀಗೆ ದ್ರೌಪದಿಯ ಸ್ವರೂಪವನ್ನು ಪರಿಚಯಿಸಿ ಕೊಟ್ಟವರು ಶ್ರೀವೇದವ್ಯಾಸರಾದರೆ ಅದನ್ನು ತಮ್ಮ ಮಹಾಭಾರತತಾತ್ಪರ್ಯನಿರ್ಣಯದಲ್ಲಿ ಎಳೆಎಳೆಯಾಗಿ ಬಿಡಿಸಿ ಸ್ಪಷ್ಟಪಡಿಸಿದವರು ಭೀಮಸೇನನೇ ಆದ ಶ್ರೀಮಧ್ವಾಚಾರ್ಯರು.

ಮಹಾಭಾರತದ ಆದಿ ಪರ್ವದ ಪ್ರಾರಂಭದಲ್ಲಿಯೇ 'ಅಂಶಾವತಾರಪರ್ವ' ಎಂದು ಒಂದು ಅಧ್ಯಾಯದಲ್ಲಿ ಮಹಾಭಾರತದಲ್ಲಿ ಯಾವ ಯಾವ ಪಾತ್ರ ಯಾವ ಯಾವ ದೇವತೆಯ ಅಥವಾ ದೈತ್ಯನ ಅವತಾರ, ಆವೇಶಯುಕ್ತ – ಎಂದೆಲ್ಲ ಮಾಹಿತಿಯನ್ನು ನೀಡಲಾಗುವುದು. ನಾಟಕಸಿನಿಮಾಗಳ ಪ್ರಾರಂಭದಲ್ಲಿ ಆ

ನಾಟಕಸಿನಿಮಾಗಳಲ್ಲಿ ಪಾತ್ರವಹಿಸುವ ತಾರಾಗಣ ಪರಿಚಯವನ್ನು ಹೇಗೆ ನೀಡಲಾಗುವುದೋ ಹಾಗೆ. ಅದರಲ್ಲಿ ಹೇಳಿದ ವಿಚಾರಗಳನ್ನು ಗಮನದಲ್ಲಿಟ್ಟುಕೊಂಡು ಆಯಾ ಪಾತ್ರದ ವಿಮರ್ಶೆಗೆ ತೊಡಗಿದರಷ್ಟೇ ಅದು ಸರಿಯಾದ ವಿಮರ್ಶೆ ಎನಿಸಬಲ್ಲದು. ಆದರೆ ಶ್ರೀಮದಾಚಾರ್ಯರನ್ನು ಬಿಟ್ಟರೆ ಬೇರೆ ಯಾರೂ ಈ ಬಗ್ಗೆ ಹೆಚ್ಚು ಗಮನ ಹರಿಸಿಯೇ ಇಲ್ಲ.

## ಭೀಮಸೇನನೇ ದ್ರೌಪದೀಪತಿ

ದ್ರೌಪದಿಯು ಪ್ರಧಾನವಾಗಿ ಭಾರತೀದೇವಿಯಾಗಿರುವುದರಿಂದ ದ್ರೌಪದಿ ಭೀಮಸೇನನ ಪತ್ನಿ. ಉಳಿದ ದೇವಿಯರೆಲ್ಲ ಶಾಪದ ಬಿಡುಗಡೆಗಾಗಿಯಷ್ಟೇ ದ್ರೌಪದಿಯ ಶರೀರದಲ್ಲಿ ಸೇರಿಕೊಂಡಿದ್ದು, ಅವರಿಗೆ ಬೇಕಿದ್ದುದು ತಮ್ಮ ತಮ್ಮ ಗಂಡಂದಿರ ಸಂಪರ್ಕವಷ್ಟೇ. ದ್ರೌಪದೀ ಎಲ್ಲರ ಜೊತೆಗೆ ಸಂಸಾರ ನಡೆಸಿದರೂ, ಆಯಾ ದೇವಿಗೆ ತನ್ನ ತನ್ನ ಪತಿಯ ಭೋಗವಷ್ಟೇ ದೊರಕುವಂತೆ, ಭೋಗದಲ್ಲಿ ಸಾಂಕರ್ಯವಾಗದಂತೆ ವ್ಯವಸ್ಥಿತವಾಗಿ ಭೋಗಿಸುವ ಸಾಮರ್ಥ್ಯ ಇದೆ. ಒಬ್ಬ ವಿದ್ಯುತ್ತಜ್ಞ 'ಮೇನ್‌ಸ್ವಿಚ್' ಆರಿಸಿ ಅಥವಾ ಟೆಸ್ಟರ್‌ನ ಮೂಲಕ ಪರೀಕ್ಷಿಸಿ ವಿದ್ಯುತ್ತಂತಿಯನ್ನು ಮುಟ್ಟುವನು. ಏನೂ ಅಪಾಯಕ್ಕೊಳಗಾಗುವುದಿಲ್ಲ. ಅಂತೆಯೇ ದೇವತೆಗಳು. ಸಾಮರ್ಥ್ಯ ವಿಶೇಷವುಳ್ಳವರು. 'ಯೋಗಿ'ಗಳಾಗಿ ಬದುಕುವ ಅವರಲ್ಲಿ ಸಾಂಕರ್ಯ ಬಾರದಂತೆ ಭೋಗಿಸುವ ಸಾಮರ್ಥ್ಯ ಇದೆ. 'ಯೋಗಿ'ಗಳಾಗಿ ಜೀವನವನ್ನು ನಡೆಸದ ನಮ್ಮಲ್ಲಿ ಅಂತಹ ಸಾಮರ್ಥ್ಯವನ್ನು ನಿರೀಕ್ಷಿಸಲೂ ಬರುವುದಿಲ್ಲ. ದೇವತೆಗಳ ಭೋಗದ ಕ್ರಮವೇ ಬೇರೆ. **'ಅನ್ಯಾದೃಶಾ ಹಿ ಸುರಭುಕ್ತಿರತೋಽನ್ಯರೂಪಾ ಮಾನುಷ್ಯಭುಕ್ತಿರಿತಿ ನಾತ್ರ ವಿಚಾರ್ಯಮಸ್ತಿ'** ಎಂಬ ಮಾತಿನಲ್ಲಿ ಆಚಾರ್ಯರು ಸ್ಪಷ್ಟಪಡಿಸಿರುವರು. ಮಹಾಭಾರತದಲ್ಲೂ ಈ ಪ್ರಸಂಗದ ದ್ರೌಪದಿಯ ಹಿರಿಮೆ ಅಪೂರ್ವರೀತಿಯಲ್ಲಿ ನಿರೂಪಿತವಾಗಿದೆ:

**ಇದಂ ಚ ತತ್ರಾದ್ಭುತಮುತ್ತಮಂ ತದಾ ದಧಾರ ಕೃಷ್ಣಾ ವಪುಷಾಽತಿಮಾನುಷಮ್।**
**ಮಹಾನುಭಾವಾ ಕಿಲ ಸಾಧುಮಧ್ಯಮಾ ಬಭೂವ ಕನ್ಯೈವ ಗತೇ ಗತೇಽಹನಿ॥**

ಪಶುಗಳು ಸಿಪ್ಪೆ ಸಹಿತವಾಗಿ ಇಡೀ ಬಾಳೇಹಣ್ಣನ್ನೇ ತಿಂದು ಬಿಡುತ್ತವೆ. ಕೈಗಳುಳ್ಳ ಮನುಷ್ಯ ಸಿಪ್ಪೆ ತೆಗೆದು ಅದರ ಸಾರವನ್ನಷ್ಟೇ ತಿನ್ನುತ್ತಾನೆ. ಭಗವಂತ ಹಾಗೂ ದೇವತೆಗಳು ಸಮರ್ಪಣೆಗಾಗಿ ಬಾಳೆಹಣ್ಣನ್ನು ಇಟ್ಟರೆ ಅದರ ಬಾಹ್ಯರೂಪದಲ್ಲಿ

ಏನೂ ವ್ಯತ್ಯಾಸ ಆಗದ ಹಾಗೆ ಅದರ ಸಾರಭಾಗವನ್ನಷ್ಟೇ ಸ್ವೀಕರಿಸುವರು. ಹೀಗೆ ಭೋಗಿಸುವ ಕ್ರಮದಲ್ಲಿ ವ್ಯತ್ಯಾಸ ಇದೆ.

ಅದರಂತೆಯೇ ದ್ರೌಪದಿಯ ದೇಹದಲ್ಲಿ ಐವರು ದೇವಿಯರ ಸಮಾವೇಶವಿದ್ದರೂ ಭೋಗದಲ್ಲಿ ಸಾಂಕರ್ಯ ಬಾರದಂತೆ ಅವರವರ ಪತಿಯರ ಜೊತೆಗೆ ಅವರ ಭೋಗ ನಡೆಯುತ್ತಿತ್ತು. ಗಾಳಿಯಲ್ಲಿ ಆಮ್ಲಜನಕ, ಸಾರಜನಕ ಮುಂತಾದ ಬೇರೆ ಬೇರೆ ಘಟಕಗಳಿದ್ದರೂ, ಬೆಂಕಿ ಅದರಲ್ಲಿಯೂ ಆಮ್ಲಜನಕವನ್ನಷ್ಟೇ ಸ್ವೀಕರಿಸಿ ಬದುಕುವುದು. ಹೀಗೆ ಜಡಪದಾರ್ಥಗಳಿಗೇ ಅಂತಹ ಸಾಮರ್ಥ್ಯ ಇದೆ ಎಂದ ಮೇಲೆ ಯೋಗಿಗಳೆನಿಸಿರುವ ದೇವತೆಗಳಿಗೆ ಸಾಂಕರ್ಯ ಬರದಂತೆ ಭೋಗಿಸುವ ಸಾಮರ್ಥ್ಯ ಇದೆ ಎಂಬುವುದರಲ್ಲಿ ಸಂಶಯ ಪಡಲು ಅವಕಾಶವೇ ಇಲ್ಲ.

ದ್ರೌಪದಿ ಪರಿಶುದ್ಧಳೆಂಬುದಕ್ಕೆ ಆಚಾರ್ಯರು ಸೂಚಿಸಿರುವ ಮತ್ತೊಂದು ಕಾರಣ – **'ವೇದಿಮಧ್ಯಾತ್ ಸಮುತ್ಥಿತಾ....'** – ಯಜ್ಞಕುಂಡದ ಮಧ್ಯದಿಂದ ಪ್ರಾದುರ್ಭವಿಸಿದವಳು ದ್ರೌಪದಿ. **'ತೀರ್ಥೋದಕಂ ಚ ವಹ್ನಿಶ್ಚ ನಾನ್ಯತಃ ಶುದ್ಧಿಮರ್ಹತಃ'** – ಎಂದು ಭವಭೂತಿ ತಿಳಿಸಿರುವಂತೆ ತೀರ್ಥದ ನೀರು ಹಾಗೂ ಅಗ್ನಿ ಸಹಜವಾಗಿ ಪವಿತ್ರವಾದವು. ಮತ್ತೊಂದರಿಂದ ಪವಿತ್ರೀಕರಿಸಬೇಕಾದವುಗಳಲ್ಲ. ಅಂತಹ ಅಗ್ನಿಯಿಂದ ಅದೂ ಯಜ್ಞಾಗ್ನಿಯಿಂದ ಪ್ರಾದುರ್ಭವಿಸಿದವಳು ದ್ರೌಪದೀ ಎಂದಮೇಲೆ ಅವಳ ವಿಷಯದಲ್ಲಿ ಯಾವುದೇ ಬಗೆಯ ಅಪಾವಿತ್ರ್ಯದ ಶಂಕೆಗೆ ಅವಕಾಶವೇ ಇಲ್ಲ.

ದ್ರೌಪದೀ ಮುಖ್ಯವಾಗಿ ಭೀಮಸೇನನ ಪತ್ನಿ ಎಂಬುದು ಮಹಾಭಾರತದ ಮುಂದಿನ ಕಥಾಭಾಗವನ್ನು ಪರಿಶೀಲಿಸಿದರೆ ಸ್ಪಷ್ಟವಾಗಬಲ್ಲದು. ದ್ರೌಪದಿಗೆ ಬರುವ ಆಪತ್ತಿನ ಸ್ಥಿತಿ, ಅವಮಾನದ ಸ್ಥಿತಿ – ಇವುಗಳಲ್ಲೆಲ್ಲ ಸಂರಕ್ಷಣೆ ನೀಡಿದವನು ಭೀಮಸೇನನೇ. ಆದುದರಿಂದ ಅವನೇ ದ್ರೌಪದಿಗೆ ಮುಖ್ಯ ಪತಿ.

## ದುರ್ಯೋಧನಾದಿಗಳ ಮಾನಸಂರಕ್ಷಣೆಯೂ ಭೀಮನಿಂದಲೇ

ಮುಂದೆ ಧೃತರಾಷ್ಟ್ರಾದಿಗಳು ಅನಿವಾರ್ಯವಾಗಿ ಪಾಂಡವರನ್ನು ಹಸ್ತಿನಾಪುರಕ್ಕೆ ಕರೆಸಿಕೊಳ್ಳುವರು; ರಾಜ್ಯಭಾರ ನಡೆಯುತ್ತಿತ್ತು.

ಬಹು ವಿಚಿತ್ರ ಪ್ರಸಂಗ. ಕಲಿಂಗ ರಾಜ್ಯದ, (ಈಗಿನ ಒರಿಸ್ಸಾದ) ರಾಜ ಸುವಜ್ರ. ಅವನ ಮಗಳ ಸ್ವಯಂವರ ಘೋಷಿಸಲ್ಪಡುವುದು. ಎಲ್ಲ ರಾಜರು ಪಾಲ್ಗೊಳ್ಳುವರು. ರಾಜನೂ, ರಾಜಕುಮಾರಿಯೂ ದುಷ್ಟರೆಂದು ಪಾಂಡವರು ಭಾಗವಹಿಸಿರುವುದಿಲ್ಲ. ದುರ್ಯೋಧನಾದಿಗಳು ಪಾಲ್ಗೊಂಡಿರುವರು. ದುರ್ಯೋಧನ ಸ್ವಯಂವರದ ನಿಯಮಗಳನ್ನು ಉಲ್ಲಂಘಿಸಿ ಆ ಕನ್ಯೆಯನ್ನು ಬಲಾತ್ಕಾರವಾಗಿ ಎಳೆದು ತರಲು ತೊಡಗುವನು. ಜರಾಸಂಧ ದುರ್ಯೋಧನಾದಿಗಳನ್ನು ಬಂಧಿಸುವನು. ಕರ್ಣ ತಪ್ಪಿಸಿಕೊಳ್ಳುವನು. ಜರಾಸಂಧನಿಗೆ ಬ್ರಹ್ಮವರ, ಶಿವವರ, ಹಾಗೂ ದುರ್ವಾಸರ ವರ ಇದ್ದರೆ ಸುವಜ್ರನಿಗೆ ಶಿವವರ ಇತ್ತು. ಆದ್ದರಿಂದ ದುರ್ಯೋಧನಾದಿಗಳಿಗೆ ಅವರನ್ನು ಎದುರಿಸಲು ಆಗಲಿಲ್ಲ. ಎಲ್ಲ ಸೆರೆ ಸಿಕ್ಕಿದರು. ಈ ಸುದ್ದಿ ಹಸ್ತಿನಾಪುರಕ್ಕೆ ತಲುಪಿತು. ಭೀಷ್ಮಾದಿಗಳು ಬಂದು ಭೀಮನಲ್ಲಿ ದುರ್ಯೋಧನಾದಿಗಳನ್ನು ಬಿಡಿಸಿಕೊಂಡು ಬರಲು ತಿಳಿಸುವರು. ಭೀಮ ಏನೂ ಸೇನೆ ತೆಗೆದುಕೊಳ್ಳದೆಯೇ ಬರೇ ಒಂದು ರಥವನ್ನೇರಿ ಹೊರಡುವನು. **'ಅಸಹಾಯಶೂರ'** ಭೀಮಸೇನ ಜರಾಸಂಧಾದಿಗಳನ್ನೆಲ್ಲ ಸೋಲಿಸಿ ಸುವಜ್ರನನ್ನು ಸಂಹರಿಸಿ ಅವರಿಂದ ಬಂಧಿತರಾಗಿದ್ದ ದುರ್ಯೋಧನಾದಿಗಳನ್ನೆಲ್ಲ ಅವರ ಹಗ್ಗದ ಕಟ್ಟುಗಳನ್ನು ಬಿಡಿಸದೇ ಹಾಗೆಯೇ ರಥದಲ್ಲಿ ಹಸ್ತಿನಾಪುರಕ್ಕೆ ಕರೆತರುವನು. ಅದರಿಂದಾಗಿ ಅವರು 'ಮೃತಕಪ್ರತೀಕಾಃ' ಪ್ರೇತಕಳೆಗೊಳಗಾದವರಂತೆ ಕಾಣುತ್ತಿದ್ದರೆಂದು ವರ್ಣಿಸಲಾಗಿದೆ.

ಭೀಮಸೇನ ದುರ್ಯೋಧನಾದಿಗಳನ್ನು ಹೀಗೆ ಬಿಡಿಸಿಕೊಂಡು ಬರಲು ಎರಡು ಪ್ರಮುಖ ಕಾರಣಗಳು. ಭೀಷ್ಮದ್ರೋಣಾದಿಗಳು ಬಿಡಿಸಿಕೊಂಡು ಬರಲು ತಿಳಿಸಿದ್ದು, ಆ ಗುರು ಹಿರಿಯರ ಮಾತಿಗೆ ಗೌರವ ಸಲ್ಲಿಸಬೇಕು; ಕೌರವ ಕುಲದ ಪ್ರತಿಷ್ಠೆಯನ್ನು ಕಾಪಾಡಬೇಕು. ಎಂಬುದು ಒಂದು ಕಾರಣ. ಮತ್ತೊಂದು ಕಾರಣ– ದುರ್ಯೋಧನಾದಿಗಳು ಮುಂದೆ ತನ್ನ ಮೂಲಕ ಸಂಹಾರಕ್ಕೊಳಗಾಗಬೇಕಾದವರು. ಆದ್ದರಿಂದ ಅವರು ಇತರರ ಪಾಲಾಗಬಾರದು. ಹೇಗೆ ಸಿಂಹ ತನ್ನ ಬೇಟೆಯನ್ನು ಬೇರೆಯವರಿಂದ ತಪ್ಪಿಸಿ ತರುವುದೋ ಹಾಗೆ.

ಹೀಗೆ ದುರ್ಯೋಧನಾದಿಗಳ ಮಾನಸಂರಕ್ಷಣೆ ಭೀಮಸೇನನಿಂದ ನಡೆದಿದೆಯಾದರೂ ಆ ನಿಟ್ಟಿನಲ್ಲಿ ಅವರು ಭೀಮಸೇನನ ವಿಷಯದಲ್ಲಿ ಕೃತಘ್ನರಾಗಿ

ನಡೆದುಕೊಳ್ಳುವ ಬದಲು ಕೃತಘ್ನರಾಗಿಯೇ ನಡೆದುಕೊಳ್ಳುತ್ತಿದ್ದರು. ಕೃತಜ್ಞತೆ ಅವರ ಹಣೆಯಲ್ಲಿ ಬರೆದೇ ಇಲ್ಲ – **'ಕೃತಘ್ನೇ ನಾಸ್ತಿ ನಿಷ್ಕೃತಿಃ'**

ಭೀಮಸೇನನ ಪರಾಕ್ರಮದ ಅಸಾಧಾರಣ ಮುಖವನ್ನು ಸ್ಪಷ್ಟಪಡಿಸುವ ಈ ಕಥಾಭಾಗವನ್ನು ಹೆಚ್ಚಿನ ಜನ ಗಮನಿಸಿಲ್ಲ.

## ರಾಜ್ಯಪಾಲನೆಯಲ್ಲಿ ಭೀಮಸೇನನ ಪಾತ್ರ

ಧೃತರಾಷ್ಟ್ರ ಪಾಂಡವರಿಗೆ 'ಇಂದ್ರಪ್ರಸ್ಥ' ರಾಜ್ಯದ ಭಾಗವನ್ನು ನೀಡಿ, ತಾನು ಹಸ್ತಿನಾಪುರವನ್ನು ಆಳುತ್ತಿದ್ದನು. ಶ್ರೀಕೃಷ್ಣನ ಅನುಗ್ರಹದಿಂದ ಪಾಂಡವರು ಇಂದ್ರಪ್ರಸ್ಥವನ್ನು ಚೆನ್ನಾಗಿಯೇ ಆಳುತ್ತಿದ್ದರು. ರಾಜ್ಯದ ಪಾಲನೆಯಲ್ಲಿ ಒಬ್ಬೊಬ್ಬರು ಒಂದೊಂದು ಕೆಲಸವನ್ನು ಹಂಚಿಕೊಂಡು ನಿರ್ವಹಿಸುತ್ತಿದ್ದರು. ಭೀಮಸೇನನ ಕೆಲಸ – **ಧರ್ಮಾನುಶಾಸ್ತಿಹರಿತತ್ತ್ವಶಂಸನಸ್ವರಾಷ್ಟ್ರರಕ್ಷಾದಿಷು ಭೀಮ ಆಸೀತ್'** – ಪ್ರಜೆಗಳಿಗೆ ಯಾವುದು ಧರ್ಮ, ಯಾವುದು ಅಧರ್ಮ ಎಂದು ತಿಳಿಸಿ ಹೇಳುವುದು, ಶ್ರೀವಿಷ್ಣುಸರ್ವೋತ್ತಮತ್ವದ ಸಮರ್ಥನೆ – ಇವೆರಡರ ಜೊತೆಗೆ ತನ್ನ ರಾಷ್ಟ್ರದ ಸಂರಕ್ಷಣೆ ಮುಂತಾದವುಗಳನ್ನು ಭೀಮಸೇನ ನಡೆಸುತ್ತಿದ್ದನು. ಧರ್ಮಾನುಶಾಸನ ಹಾಗು ಹರಿತತ್ತ್ವಶಂಸನ ಇವೆರಡು ಋಷಿಗಳು, ಬ್ರಾಹ್ಮಣರು ಮುಖ್ಯವಾಗಿ ನಡೆಸಬೇಕಾದವು. ಕ್ಷತ್ರಿಯನಾದ ಭೀಮಸೇನ ತನ್ನ ಕ್ಷತ್ರಿಯ ಕರ್ತವ್ಯದ ಜೊತೆಗೆ ಈ ಚಟುವಟಿಕೆಗಳಿಗೂ ಆದ್ಯತೆ ನೀಡುತ್ತಿದ್ದನು. ಹಾಗಾಗಿ ಭೀಮರಾಜ್ಯ ರಾಮರಾಜ್ಯದಂತೆ ಪ್ರಜೆಗಳ ನೆಮ್ಮದಿಗೆ ಕಾರಣವಾಗಿತ್ತು.

## ಕಾಳೀ ಸ್ವಯಂವರ

ಕಾಶಿರಾಜನಿಗೆ ಕಾಳೀ ಎಂಬ ಮಗಳಿದ್ದಳು. **'ಕೇವಲಾ ಭಾರತೀ ಸಾ..'** ಸಾಕ್ಷಾತ್ ಭಾರತಿಯೇ ಆ ಕಾಳಿಯಾಗಿದ್ದಳು. ಆದ್ದರಿಂದಲೇ ತುಂಬ ಸುಂದರಿಯಾಗಿದ್ದಳು. ಅವಳ ಸ್ವಯಂವರ ಘೋಷಿಸಲ್ಪಟ್ಟಿತ್ತು ; ಎಲ್ಲ ರಾಜರೂ ಬಂದಿದ್ದರು. ಸ್ವಯಂವರದ ನಿಯಮ ತುಂಬ ಸರಳವಾಗಿತ್ತು. ಕನ್ಯೆ ಯಾರ ಕೊರಳಿಗೆ ಮಾಲೆ ಹಾಕುವಳೋ ಅವನಿಗೆ ಅವಳನ್ನು ಕೊಟ್ಟು ವಿವಾಹ ಮಾಡುವುದೆಂದು ನಿರ್ಧರಿಸಲಾಗಿತ್ತು. ಕಾಳಿ ಅಲ್ಲಿ ನೆರದಿದ್ದ ಎಲ್ಲ ರಾಜರ ಮಧ್ಯದಲ್ಲಿ ಭೀಮನ ಹೆಗಲಿನಲ್ಲಿ ಆ ಮಾಲೆಯನ್ನು ಇಡುವಳು. ಇದರಿಂದ ಕ್ರುದ್ಧರಾದ ಜರಾಸಂಧಾದಿಗಳು ವಿಷ್ಣುವನ್ನು ಆಕ್ಷೇಪಿಸುತ್ತ ಭೀಮಸೇನನ ವಿರುದ್ಧ ಕಾದಾಡಲು ಬರುವರು. ಮೊದಲು ವಾಗ್ಯುದ್ಧ ಬಳಿಕ ಬಾಹುಯುದ್ಧ. ಭೀಮಸೇನ ಸದಾಗಮಗಳಿಂದ, ಒಳ್ಳೆಯ ಯುಕ್ತಿಗಳಿಂದ

ವಿಷ್ಣುಸರ್ವೋತ್ತಮತ್ವವನ್ನು ಸಮರ್ಥಿಸುವನು. ಶಿವಸರ್ವೋತ್ತಮತ್ವವನ್ನು ನಿರಾಕರಿಸುವನು. ವಾಗ್ಯುದ್ಧದಲ್ಲಿ ನಿರುತ್ತರನಾದ ಆ ರಾಜರನ್ನು ಬಾಹುಯುದ್ಧಕ್ಕೆ ಆಹ್ವಾನಿಸುವನು. ಶಸ್ತ್ರಧಾರಿಗಳಾಗಿ ಬಂದ ರಾಜರನ್ನೆಲ್ಲ ಸೋಲಿಸಿ ಓಡಿಸುವನು. ಅವರಲ್ಲಿ ಪ್ರಮುಖನಾದ ಜರಾಸಂಧನನ್ನು ಗದೆಯಿಂದ ಥಳಿಸಿ ಬಾಹುಗಳಿಂದ ಹಿಡಿದು ಗಂಗಾನದಿಯಲ್ಲಿ ಎಸೆಯುವನು. ವಿಷ್ಣುವಿನ ಪಾದೋದಕವಾದ ಗಂಗೆಯಲ್ಲಿ ಸ್ನಾನವನ್ನೇ ಮಾಡುವುದಿಲ್ಲ ಎಂದು ವ್ರತ ತೊಟ್ಟಿದ್ದ ಜರಾಸಂಧ ತಾನು ವ್ರತದಿಂದ ಭ್ರಷ್ಟನಾಗುವಂತಾದುದಕ್ಕೆ ನಾಚಿಕೆಪಟ್ಟುಕೊಂಡು ರಾಜರ ಜೊತೆಗೆ ತನ್ನ ಮಗಧದೇಶಕ್ಕೆ ಹೊರಟು ಹೋಗುವನು. ''ಭೀಮಸೇನಸಮೋ ನಾಸ್ತಿ'' ಎಂಬ ಮಾತಿಗೆ ಇದು ಮತ್ತೊಂದು ಪುರಾವೆಯಾಗಿದೆ.

ಕಾಳಿಯಲ್ಲಿ ಭೀಮಸೇನ ಮುಂದೆ 'ಶರ್ವತ್ರಾತ' ಎಂಬ ಮಗನನ್ನು ಪಡೆಯುವನು.

## ಶಸ್ತ್ರಾಸ್ತ್ರಗಳ ಅವಶ್ಯಕತೆ ಇಲ್ಲದ ಭೀಮಸೇನ

ಬ್ರಾಹ್ಮಣನೊಬ್ಬನು ತನ್ನ ಗೋವುಗಳ ರಕ್ಷಣೆಗಾಗಿ ಮೊರೆಯಿಟ್ಟಾಗ, ಶಸ್ತ್ರದ ಮೂಲಕವೇ ಅವುಗಳ ರಕ್ಷಣೆ ಮಾಡಬೇಕಾದ ಅರ್ಜುನ ದ್ರೌಪದಿ- ಯುಧಿಷ್ಠಿರ ಜೊತೆಗಿದ್ದ ಕಾಲದಲ್ಲಿ ಶಸ್ತ್ರಾಗಾರವನ್ನು ಪ್ರವೇಶಿಸಿದ ಅಪರಾಧಕ್ಕಾಗಿ ಒಂದು ವರ್ಷ ತೀರ್ಥಯಾತ್ರೆ ಮಾಡಬೇಕಾಯಿತು. ಒಂದು ವೇಳೆ ಆ ಬ್ರಾಹ್ಮಣ ಅರ್ಜುನನ ಬದಲು ಭೀಮಸೇನನಲ್ಲಿ ಗೋವುಗಳ ರಕ್ಷಣೆಗಾಗಿ ಕೇಳಿಕೊಂಡಿದ್ದಲ್ಲಿ, ತನ್ನ ಬಾಹುಬಲದಿಂದಲೇ ಯುದ್ಧಮಾಡಿ ಆ ಹಸುಗಳನ್ನು ಬಿಡಿಸಿಕೊಂಡು ಬರಬಲ್ಲ ಭೀಮನಿಗೆ ಶಸ್ತ್ರಾಗಾರವನ್ನು ಪ್ರವೇಶಿಸುವುದು ಅನಿವಾರ್ಯವಾಗುತ್ತಿರಲಿಲ್ಲ ಎಂಬುದನ್ನು ಗಮನಿಸಬೇಕು.

ಭೀಮಸೇನ '**ಅಸಹಾಯಶೂರ**'ನಾಗಿದ್ದು, ಯುದ್ಧದಲ್ಲಿ ತನ್ನ ಬಾಹುಗಳನ್ನು ಬಿಟ್ಟು ಬೇರೆ ಆಯುಧಗಳನ್ನು ಅಪೇಕ್ಷಿಸುತ್ತಿರಲಿಲ್ಲ. ಎಂಬುದು 'ಭಾಸಕವಿ' ತನ್ನ 'ಮಧ್ಯಮವ್ಯಾಯೋಗ' ನಾಟಕದಲ್ಲಿ ಒತ್ತುಕೊಟ್ಟು ಉಲ್ಲೇಖಿಸುವಷ್ಟು ಪ್ರಸಿದ್ಧ.

ಆ ನಾಟಕದಲ್ಲಿ ಘಟೋತ್ಕಚನಿಗೆ ತಾನು ಕಾದಾಡಲು ಹೊರಟಿರುವುದು ತನ್ನ ಅಪ್ಪ ಭೀಮಸೇನನ ಜೊತೆಗೆ ಎಂಬುದು ಗೊತ್ತಿಲ್ಲ. ಭೀಮಸೇನನಿಗೆ ಮಾತ್ರ ತಾನು ತನ್ನ ಪುತ್ರನ ಜೊತೆಗೆ ಮಾತನಾಡುತ್ತಿರುವುದೆಂದು ತಿಳಿದಿತ್ತು. ಘಟೋತ್ಕಚ

ಯಾವ ಆಯುಧದಿಂದ ಕಾದಾಡುತ್ತಿ? ಎಂದು ಭೀಮಸೇನನಲ್ಲಿ ಕೇಳಿದಾಗ ಅವನು ತನ್ನ ಬಾಹುಗಳೇ ಆಯುಧಗಳು; ತನಗೆ ಬೇರೆ ಆಯುಧಗಳ ಅವಶ್ಯಕತೆ ಇಲ್ಲ ಎನ್ನುವನು. **'ಅಯಂ ತು ಮೇ ದಕ್ಷಿಣೋಬಾಹುರಾಯುಧಂ ಸಹಜಂ ಮಮ'** ಕೂಡಲೇ ಇದಕ್ಕೆ ಘಟೋತ್ಕಚನ ಪ್ರತಿಕ್ರಿಯೆ –**'ಯುಕ್ತಮೇತತ್ ಮತ್ತಿತುಃ ಭೀಮಸೇನಸ್ಯ'** – ಈ ಮಾತು ನನ್ನ ಅಪ್ಪ ಭೀಮಸೇನ ಮಾತ್ರ ಆಡಲಿಕ್ಕೆ ಯೋಗ್ಯವಾದುದು. ಆದ್ದರಿಂದ ಅವನಿಗಿಂತ ಬೇರೆಯಾದವರಿಂದ ಇಂತಹ ಮಾತು ಬರಲೇಬಾರದು – ಎಂಬುದಾಗಿ ಘಟೋತ್ಕಚ ಆ ಮಾತಿನ ಬಗ್ಗೆ ತನ್ನ ಅಸಮಾಧಾನವನ್ನು ವ್ಯಕ್ತಪಡಿಸುವನು.

ಹೀಗೆ ಭೀಮಸೇನ ಆಯುಧವಿಲ್ಲದೆಯೇ ಯುದ್ಧಮಾಡುವವನೆಂಬ ವಿಚಾರವನ್ನು ಭಾಸಕವಿ ತನ್ನ ಪಂಚರಾತ್ರಾದಿ ನಾಟಕಗಳಲ್ಲಿ ವ್ಯಾಪಕವಾಗಿ ಪ್ರತಿಪಾದಿಸಿದ್ದಾನೆ.

## ಜರಾಸಂಧವಧೆಯ ಹಿನ್ನೆಲೆ

ಸಭಾಪರ್ವದಲ್ಲಿ ರಾಜಸೂಯಯಾಗದ ಪ್ರಸಂಗ ಪ್ರಮುಖವಾದುದು. ಪಾಂಡುರಾಜ ತಾನು ಯಮಸಭೆಯಿಂದ ದೇವೇಂದ್ರನ ಸಭೆಗೆ ಹೋಗುವಂತಾಗಬೇಕಾದರೆ ತನ್ನ ಪರವಾಗಿ ತನ್ನಮಕ್ಕಳು ರಾಜಸೂಯಯಾಗ ಮಾಡಬೇಕು – ಎಂದು ನಾರದರ ಮೂಲಕ ಯುಧಿಷ್ಠಿರನಿಗೆ ಹೇಳಿ ಕಳಿಸುವನು. ಕೂಡಲೇ ಯುಧಿಷ್ಠಿರ ರಾಜಸೂಯಯಾಗ ಮಾಡುವುದೆಂದು ನಿರ್ಧರಿಸುವನು. ಕೃಷ್ಣನನ್ನು ಬರಮಾಡಿಸಿ ಆ ಬಗ್ಗೆ ವಿಚಾರಿಸುವನು. ನಾವು ಪ್ರತಿಯೊಂದು ಕರ್ಮದಲ್ಲೂ ಯಾಂತ್ರಿಕವಾಗಿಯಷ್ಟೇ **'ಭಗವತ್ಪ್ರೇರಣಯಾ ಭಗವತ್ಪ್ರೀತ್ಯರ್ಥಂ..** ಎಂದು ಹೇಳುತ್ತಿದ್ದರೆ, ಯುಧಿಷ್ಠಿರ ಅವನನ್ನು ಎದುರಿನಲ್ಲಿಯೇ ಕುಳ್ಳಿರಿಸಿಕೊಂಡು ಅವನಿಂದಲೇ ಪ್ರೇರಣೆ ಪಡೆದುಕೊಳ್ಳುತ್ತಿದ್ದ ಪುಣ್ಯಾತ್ಮ.

ಆಗಮಿಸಿದ ಕೃಷ್ಣ ಮೊದಲು ರಾಜಸೂಯಯಾಗ ನಡೆಸಬೇಕೆಂಬ ವಿಚಾರವನ್ನು ಅಭಿನಂದಿಸುವನು. ಬಳಿಕ ಹೇಳುವನು– ಯುಧಿಷ್ಠಿರ! ರಾಜಸೂಯಯಾಗ ನಡೆಸಬೇಕಾದರೆ ಜಗತ್ತಿನ ಎಲ್ಲ ರಾಜರನ್ನು ಸೋಲಿಸಬೇಕು. ಅಂತಹ ರಾಜರಲ್ಲಿ ಪ್ರಧಾನನಾದವನು ಜರಾಸಂಧ. ಅವನನ್ನು ಕೊಲ್ಲಲು ನಿನ್ನಿಂದಾದೀತೇ? **'ಕ್ವ ರಾಜಸೂಯಮದ್ಯ ತೇ ಜರಾಸುತೇ ತು ಜೀವತಿ'**. ಕೂಡಲೇ ಯುಧಿಷ್ಠಿರ ನಿರುತ್ಸಾಹ ತಾಳುವನು. – **'ನಿವರ್ತಿತಂ ಮನಃ ಕೃತೋರಲಂ ಮಮಾಮುನಾ ಪ್ರಭೋ'** –ಹಾಗಾದರೆ ರಾಜಸೂಯವನ್ನು ಇಲ್ಲಿಗೇ ಕೈಬಿಟ್ಟೆ; ಕೃಷ್ಣಾರ್ಪಣಮಸ್ತು–

ಇದು ಯಾಗ ನಡೆಸಿದ ಮೇಲೆ ಅಲ್ಲ; ಯಾಗವನ್ನು ಮಾಡದೆಯೇ ಕೃಷ್ಣಾರ್ಪಣ ಬಿಡುವ ಪ್ರಯತ್ನ.

ಕೂಡಲೇ ಭೀಮಸೇನನು ರಾಜಸೂಯಯಾಗವನ್ನು ಮಾಡಲೇಬೇಕೆಂದು ಪ್ರತಿಪಾದಿಸುವನು. ಜರಾಸಂಧನನ್ನು ಕೊಂದಮೇಲೆಯೇ ರಾಜಸೂಯಯಾಗವನ್ನು ನಡೆಸಬೇಕು ಹೊರತು ಅವನನ್ನು ಕೊಲ್ಲದೆ ಆಗುವುದಿಲ್ಲ ಎಂಬುದು ಕೃಷ್ಣನ ಅಭಿಪ್ರಾಯ. ಜರಾಸಂಧನನ್ನು ಕೊಲ್ಲಲು ಸಾಧ್ಯವಿಲ್ಲ ಎಂದು ಅಲ್ಲ. ಟಿಕೆಟ್ ಪಡೆದುಕೊಳ್ಳದೆ ಬಸ್ ಹತ್ತಬಾರದು ಎಂಬುದಕ್ಕೆ ಟಿಕೆಟ್ ಪಡೆದುಕೊಂಡೇ ಬಸ್ಸು ಹತ್ತಬೇಕೆಂಬ ಆಶಯವೇ ಹೊರತು ಬಸ್ಸು ಹತ್ತಲೇ ಬಾರದೆಂಬುದಲ್ಲ. ರಾಜಸೂಯಯಾಗವನ್ನು ಖಂಡಿತಾ ನಾವು ಮಾಡಬಹುದೆಂದು ಹೇಳುವ ಭೀಮಸೇನ ಮೂರು ಅಂಶಗಳಿಂದ ಸಂಪನ್ನರಾದವರು ಯಾವ ಕಾರ್ಯವನ್ನೂ ನಡೆಸಲು ಸಮರ್ಥರಾಗುವರೆಂದು ಎಲ್ಲ ಸಾಧಕರಿಗೆ ಸ್ಫೂರ್ತಿಪ್ರದವಾಗಿ ಉದ್ಘೋಷಿಸುವನು:

**ನಿಜಾನುಭಾವವರ್ಜಿತಾ ಹರೇರನುಗ್ರಹೋಜ್ಝಿತಾಃ ।**
**ಮಹಾಪ್ರಯತ್ನವರ್ಜಿತಾ ಜನಾ ನ ಜಗ್ಮುರುನ್ನತಿಮ್॥**

ಯಾವುದೇ ಕಾರ್ಯವನ್ನು ನಿರ್ವಹಿಸಬೇಕಾದರೆ ಆ ಕಾರ್ಯನಿರ್ವಹಣೆಗೆ ಬೇಕಾದ ಸ್ವರೂಪಯೋಗ್ಯತೆ ಬೇಕು; ಭಗವಂತನ ಅನುಗ್ರಹ ಬೇಕು. ಸರಿಯಾದ ಪ್ರಯತ್ನಬೇಕು. ಈ ಮೂರೂ ಇತ್ತೆಂದರೆ ಎಂತಹ ಕಾರ್ಯವನ್ನೂ ನಡೆಸಬಹುದಾಗಿದೆ. ಜರಾಸಂಧನನ್ನು ಸಂಹರಿಸಿ ರಾಜಸೂಯಯಾಗ ನಡೆಸಲು ಬೇಕಾದ ಯೋಗ್ಯತೆ ನನ್ನಲ್ಲಿದೆ. ಶ್ರೀಕೃಷ್ಣನು ನಮ್ಮ ಪ್ರಾರ್ಥನೆಯಂತೆ ಇಲ್ಲಿಗೆ ಬಂದಿರುವುದೇ ಅವನ ಅನುಗ್ರಹ ನಮ್ಮ ಮೇಲಿದೆ ಎಂಬುದಕ್ಕೆ ಜ್ಞಾಪಕ. ಇನ್ನು ಸರಿಯಾದ ಪ್ರಯತ್ನವನ್ನು ನಡೆಸಿದೆವೆಂದರೆ ಜರಾಸಂಧನನ್ನು ಖಂಡಿತಾ ಸೋಲಿಸಬಹುದಾಗಿದೆ:

**ಪ್ರಯತ್ನಮೇಕಮಾತ್ರತೋ ನಿಧಾಯ ಭೂತಿಮಾಪ್ನುಮಃ ।**

ಹೀಗೆ ಜರಾಸಂಧನನ್ನು ಕೊಲ್ಲಲು ಅಶಕ್ಯ ರಾಜಸೂಯಯಾಗದ ಸುದ್ದಿ ಬೇಡ ಎಂಬುದು ಯುಧಿಷ್ಠಿರನ ಮತವಾದರೆ, ಜರಾಸಂಧವಧೆ ಸುಶಕ್ಯ ರಾಜಸೂಯಯಾಗ ಮಾಡಲೇಬೇಕೆಂದು ಭೀಮಸೇನನ ಮತ. ಇವುಗಳಲ್ಲಿ **'ಹನುಮನ ಮತವೇ ಹರಿಯ ಮತವು ಹರಿಯ ಮತವೇ ಹನುಮನ ಮತ'** – ಎಂಬುದಾಗಿ ಪುರಂದರದಾಸರು ತಿಳಿಸಿರುವಂತೆ ಭೀಮಸೇನನ ಮತವನ್ನೇ ಶ್ರೀಕೃಷ್ಣ

ಒಪ್ಪಿಕೊಳ್ಳುವನು. ಭೀಮನಾದರೂ ಶ್ರೀಕೃಷ್ಣನ ಮತವನ್ನೇ ಸ್ಪಷ್ಟಪಡಿಸಿರುವನು. ಇಡೀ ಮಹಾಭಾರತದಲ್ಲಿ ಯಾವುದೇ ಪ್ರಸಂಗದಲ್ಲಿ ಭೀಮಸೇನ ಹಾಗೂ ಕೃಷ್ಣ ಇವರೊಳಗೆ ಅಭಿಪ್ರಾಯ ಭೇದ ಬಂದದ್ದೇ ಇಲ್ಲ. ತಂದೆಮಕ್ಕಳಲ್ಲಿ, ಗಂಡಹೆಂಡಿರಲ್ಲಿ, ಅಣ್ಣತಮ್ಮಂದಿರಲ್ಲಿ ಭಿನ್ನಾಭಿಪ್ರಾಯ ಕಾಣಿಸಿಕೊಳ್ಳುವುದುಂಟು. ಆದರೆ ಭೀಮಕೃಷ್ಣರಲ್ಲಿ ಮಾತ್ರ ಎಂದೂ ಭಿನ್ನಾಭಿಪ್ರಾಯವಿರಲೇ ಇಲ್ಲ.

## ಜರಾಸಂಧನ ವಧೆ

ಭೀಮಸೇನನ ಮಾತನ್ನು ಅನುಮೋದಿಸುತ್ತ ಶ್ರೀಕೃಷ್ಣನು ತಾನು ಭೀಮಾರ್ಜುನರೊಂದಿಗೆ ಜರಾಸಂಧನಲ್ಲಿಗೆ ಹೋಗಿ ಅವನನ್ನು ಮುಗಿಸಿ ಬರುವುದಾಗಿ ತಿಳಿಸುವನು. ಮೂವರೂ ಬ್ರಾಹ್ಮಣವೇಷ ಹಾಕಿಕೊಂಡು ಹೊರಡುವರು. ಬರಿಗೈಯಲ್ಲಿ ಹೋಗಿ ಜರಾಸಂಧನ ಸಂಹಾರ ನಡೆಸುವ ಪ್ರಯುಕ್ತ ವಿಶೇಷವಾದ ಕೀರ್ತಿ ಭೀಮಸೇನನ ಪಾಲಿಗೆ ಬರುವಂತೆ ಮಾಡಬೇಕೆಂಬುದಕ್ಕಾಗಿ ಶ್ರೀಕೃಷ್ಣ ತಾನೂ ಬ್ರಾಹ್ಮಣ ವೇಷ ತೊಟ್ಟ; ಭೀಮಾರ್ಜುನರೂ ಬ್ರಾಹ್ಮಣವೇಷ ತೊಡುವಂತೆ ತಿಳಿಸುವನು. ಕ್ಷತ್ರಿಯ ವೇಷದಲ್ಲಿದ್ದಲ್ಲಿ ಬರಿಗೈಯಲ್ಲಿ ಜರಾಸಂಧನಲ್ಲಿಗೆ ಹೋಗಲಾಗುತ್ತಿದ್ದಿಲ್ಲ. ಬ್ರಾಹ್ಮಣರಿಗೆ ಶಾಸ್ತ್ರತ್ಯಾಗ ಎಷ್ಟು ನಿಷಿದ್ಧವೋ ಕ್ಷತ್ರಿಯರಿಗೆ ಶಸ್ತ್ರತ್ಯಾಗ ಅಷ್ಟೇ ನಿಷಿದ್ಧ. ಆದುದರಿಂದ ಶಸ್ತ್ರವನ್ನು ಹಿಡಿದುಕೊಳ್ಳದೆ ಹೋಗಲು ಅನುಕೂಲವಾಗುವಂತೆ ಬ್ರಾಹ್ಮಣವೇಷವನ್ನು ಧರಿಸಿಕೊಂಡು ಜರಾಸಂಧನಲ್ಲಿಗೆ ಹೋಗುವರು. ತಮ್ಮ ಪರಿಚಯ ಮಾಡಿಸಿಕೊಟ್ಟ ಶ್ರೀಕೃಷ್ಣ ಶಿವಯಾಗಕ್ಕೆ ಬಲಿಕೊಡಲು ಕಾರಾಗೃಹದಲ್ಲಿ ಬಂಧಿಸಿರುವ 22,800 ಮಂದಿ ಜನರನ್ನು ಬಿಡುಗಡೆಗೊಳಿಸಬೇಕು, ಇಲ್ಲವೇ ಅವನು ತಮ್ಮಲ್ಲಿ ಯಾರಾದರೂ ಒಬ್ಬರ ಜೊತೆಗೆ ಕಾದಾಡಬೇಕು – ಎಂದು ಅವನಿಗೆ ತಿಳಿಸುವನು. ರಾಜರನ್ನು ಬಿಡುಗಡೆಗೊಳಿಸಲು ಸಿದ್ಧನಾಗದ ಜರಾಸಂಧ ಯುದ್ಧವನ್ನೇ ಆಯ್ಕೆ ಮಾಡಿಕೊಳ್ಳುವನು. ಕೃಷ್ಣನ ವಿರುದ್ಧ ಕಾದಾಡಿ ಜಯಿಸಲು ಸಾಧ್ಯವೇ ಇಲ್ಲ ಎಂದು ನಿಶ್ಚಯಹೊಂದಿದ್ದ ಜರಾಸಂಧ ರಾಜನಲ್ಲದ ಕೃಷ್ಣನ ಜೊತೆ ಕಾದಾಡಲು ತನಗೆ ಮನಸ್ಸಿಲ್ಲ ಎಂದು ಜಾರಿಕೊಳ್ಳುವನು. ಜರಾಸಂಧ ಆಗಾಗಲೇ ಹದಿನೆಂಟು ಬಾರಿ ಕೃಷ್ಣನ ವಿರುದ್ಧ ಕಾದಾಡಿ ಸೋತು ಬಂದಿದ್ದವನು. ಕೃಷ್ಣನು ಗೋಪ ಎಂದು ಅವನ ಜೊತೆ ಕಾದಾಡುವುದಿಲ್ಲ ಎಂಬುದು ನಿಜವಾಗಿದ್ದರೆ ಜರಾಸಂಧ ಅದುವರೆಗೆ ಕೃಷ್ಣನ ಜೊತೆಗೆ ಹದಿನೆಂಟು ಬಾರಿ ಕಾದಾಡಿದುದಾದರೂ ಏತಕ್ಕೆ? ಆದುದರಿಂದ ಶ್ರೀಕೃಷ್ಣ ರಾಜನಲ್ಲ ಎಂದು ಜರಾಸಂಧ ಅವನ ಜೊತೆ ಕಾದಾಡಲು ನಿರಾಕರಿಸಿದುದು

ನೆಪಮಾತ್ರ ಎಂಬುದು ಸ್ಪಷ್ಟ. ಅರ್ಜುನನಾದರೋ ತನ್ನ ಪಾಲಿಗೆ ಬಾಲಕನೇ ಸರಿ. **ಪಂಚಪಂಚಾದಶಬ್ದೋಽದ್ಯ ಹ್ಯಯಮೇವಂ ಚ ಬಾಲವತ್'** – ಎಂದು ನುಡಿದು ಅವನ ಜೊತೆಗೆ ಕಾದಾಡುವುದಕ್ಕೂ ಜರಾಸಂಧನು ನಿರಾಕರಿಸುವನು. ಭೀಮನೇ ತನಗೆ ಸರಿಯಾದ ಜೋಡಿ. ಅವನಿಂದ ಸತ್ತರೂ ತನ್ನ ಕೀರ್ತಿಗೆ ಕಳಂಕವಿರದು ಎಂದು ಯೋಚಿಸಿ ಅವನೊಂದಿಗೆ ಹೋರಾಡಲು ಸಿದ್ಧನಾಗುವನು. ಐವತ್ತೈದುವರ್ಷದ ಅರ್ಜುನನನ್ನು ಬಾಲಕನೆಂದು ನಿರಾಕರಿಸಿದರೆ ಐವತ್ತಾರುವರ್ಷದ ಭೀಮಸೇನನನ್ನು ಪ್ರೌಢನೆಂದು ಅವನು ಭಾವಿಸಲು ಬಲವೇ ಪ್ರಮುಖ ಆಧಾರವಾಗಿತ್ತು ಎಂಬುದು ಸ್ಪಷ್ಟ. ಬಾಹುಯುದ್ಧವೋ ಅಸ್ತ್ರಯುದ್ಧವೋ ಎಂಬ ಸಂಶಯಕ್ಕೆ ಒಳಗಾದ ಅರ್ಜುನನು ಮಲ್ಲಯುದ್ಧವಾದಲ್ಲಿ ತನಗೆ ಜಯಿಸಲು ಸಾಧ್ಯವಾಗದು ಎಂಬ ಭಾವನೆಯಿಂದ ('ಕುರು ತರ್ಹಿ ಪರೀಕ್ಷಣಂ') ಪರೀಕ್ಷೆ ಆಗಿಯೇ ಬಿಡಲಿ ಎಂಬುದಾಗಿ ಸವಾಲು ಹಾಕಲು ಮುಂದುವರಿಯದಾದನು.

ಅರ್ಜುನ ಕೆಲವು ಪ್ರಸಂಗಗಳಲ್ಲಿ ಒಮ್ಮೊಮ್ಮೆ ತಾನು ಭೀಮನಿಗಿಂತಲೂ ಹೆಚ್ಚು ಪರಾಕ್ರಮಿ ಎಂದು ಅಹಂಕಾರಪಡುತ್ತಿದ್ದನು. ಜರಾಸಂಧನ ಮೂಲಕ ಅವನಿಗೆ ಅವಮಾನ ಆಗುವಂತೆ ಮಾಡಿ ಅವನ ಅಹಂಕಾರವನ್ನು ಇಳಿಸುವುದಕ್ಕಾಗಿಯೇ ಶ್ರೀಕೃಷ್ಣನು ಜರಾಸಂಧನಲ್ಲಿಗೆ ಅರ್ಜುನನನ್ನೂ ಕರೆದೊಯ್ದಿದ್ದನು. ಭಕ್ತರು ಒಮ್ಮೊಮ್ಮೆ ಅಹಂಕಾರಕ್ಕೊಳಗಾದಾಗ ಅದರ ಉಪಶಮನಕ್ಕೆ ಬೇಕಾದ ವ್ಯವಸ್ಥೆಯನ್ನು ಭಗವಂತನು ಮಾಡುವನು. ಯಾವಾಗಲೂ ಅಹಂಕಾರಕ್ಕೊಳಗಾಗುತ್ತಿರುವ ಅಭಕ್ತರ ಅಹಂಕಾರವನ್ನು ಮಾತ್ರ ಹಾಗೆ ಪರಿಹರಿಸಲು ತೊಡಗುವುದಿಲ್ಲ.

ಭೀಮಸೇನನ ಜೊತೆಗೆ ಕಾದಾಡುವುದಾಗಿ ಒಪ್ಪಿಕೊಂಡ ಜರಾಸಂಧನು ಅವನಿಗೆ ಒಂದು ಗದೆಯನ್ನು ನೀಡಿ ತಾನೂ ಗದಾಪಾಣಿಯಾಗಿ ಕಾದಾಡಲು ಪ್ರಾರಂಭಿಸುವನು. ಭೀಮಸೇನ ಅವನ ಜೊತೆ ಪಾಡ್ಯದಿಂದ ಪ್ರಾರಂಭಿಸಿ ಅಮಾವಾಸ್ಯೆಯವರೆಗೆ ಹದಿನೈದು ದಿನ ಕಾದಾಡುವನು. ಜರಾಸಂಧನಿಗೆ ಚತುರ್ಮುಖನಿಂದ ಹದಿನೈದು ದಿನಗಳವರೆಗೆ ಅಜೇಯತ್ವವರ ಇತ್ತು. ಶಿವ ಹಾಗೂ ದುರ್ವಾಸರಿಂದ ಅವಧ್ಯತ್ವ ವರಗಳಿದ್ದವು. ಅವರಿಬ್ಬರ ಅವಧ್ಯತ್ವ ವರಗಳನ್ನು ಕಡೆಗಣಿಸುವ ಭೀಮ ಚತುರ್ಮುಖನ ವರಕ್ಕೆ ಮಾನ್ಯತೆ ನೀಡುವವನಾಗಿ ಹದಿನೈದು ದಿನ ಜರಾಸಂಧನ ಜೊತೆ ಕಾದಾಡುವನು. ಕೊನೆಗೆ ಶ್ರೀಕೃಷ್ಣನ ಅನುಮತಿಯನ್ನು ಪಡೆದು **'ಪೃಷ್ಠೇಽಸ್ಯ ಜಾನುಮಾದಾಯ ಕೂರ್ಮದೇಶಂ**

ಬಭಂಜ ಹ' – ಜರಾಸಂಧನ ಬೆನ್ನಿನ ಮೇಲೆ ತನ್ನ ಮೊಣಕಾಲನ್ನೂರಿ ಅವನ ಪೃಷ್ಠಮೂಲವನ್ನು ಮುರಿದು ಹಾಕುವನು; ಬ್ರಹ್ಮಾಂಡಕಟಾಹ ಬಿರಿದಷ್ಟು ದೊಡ್ಡ ಸದ್ದು ಆಗುವುದು. ಬರಿಗೈಯಲ್ಲೇ ಜರಾಸಂಧನ ದೇಹವನ್ನು ಅವನ ಉತ್ಪತ್ತಿಕಾಲದಲ್ಲಿ ಹೇಗಿತ್ತೋ ಹಾಗೆ ಸೀಳಿ ಹಾಕುವನು. ಹೀಗೆ ಜರಾಸಂಧನ ಸಂಹಾರಕಾರ್ಯದ ಅರ್ಪಣೆಯನ್ನು ಭೀಮಸೇನನ ಅಸಾಧಾರಣ ಬಲದ, ಪೌರುಷದ ಸಂಕೇತ. ಭೀಮಸೇನ ತನ್ನ ಎದುರೇ ಇದ್ದ ಶ್ರೀಕೃಷ್ಣನಿಗೆ ಆ ಸಂಹಾರಕ್ರಿಯೆಯನ್ನು ಪೂಜೆಯಾಗಿ ಸಮರ್ಪಿಸುವನು. ಶ್ರೀಕೃಷ್ಣನು ಪ್ರೀತಿಯಿಂದ ಅದನ್ನು ಸ್ವೀಕರಿಸುವನು. ಭೀಮಸೇನ ತನ್ನ ಪೂಜಾರೂಪವಾಗಿ ನಡೆಸುವ ಜರಾಸಂಧನ ಸಂಹಾರವನ್ನು ಎದುರಿನಲ್ಲಿಯೇ ಇದ್ದುಕೊಂಡು ಸ್ವೀಕರಿಸಬೇಕೆಂಬ ಉದ್ದೇಶದಿಂದಲೇ ಶ್ರೀಕೃಷ್ಣನೂ ಭೀಮಾರ್ಜುನರ ಜೊತೆಗೆ ಮಗಧದೇಶಕ್ಕೆ ಹೋಗಿದ್ದನು. ನಾವು ಸಮರ್ಪಿಸಿದರೆ ಪರೋಕ್ಷವಾಗಿಯಷ್ಟೇ ಸ್ವೀಕರಿಸುವ ಭಗವಂತನು ಭಕ್ತೋತ್ತಮರಾದ ವಾಯುದೇವರು ಸಮರ್ಪಿಸಿದ್ದನ್ನು ನೇರವಾಗಿಯೇ ಸ್ವೀಕರಿಸುವನು. ಅದಕ್ಕಾಗಿಯೇ ನಾವು ಭಾರತೀರಮಣ ಮುಖ್ಯಪ್ರಾಣನ ಮೂಲಕವೇ ನಮ್ಮ ಸಾಧನೆಗಳನ್ನು ಭಗವಂತನಿಗೆ ಸಮರ್ಪಿಸಬೇಕು.

## ಜರಾಸಂಧನವಧೆಯ ಮಹತ್ತ್ವ

ಜರಾಸಂಧ ಹದಿನೆಂಟು ಬಾರಿ ಶ್ರೀಕೃಷ್ಣನ ವಿರುದ್ಧ ದಂಡೆತ್ತಿ ಹೋಗಿದ್ದರೂ ಶ್ರೀಕೃಷ್ಣ ಅವನನ್ನು ಸಂಹರಿಸದೆ ಉಳಿಸಿದುದರ ಉದ್ದೇಶ ಜರಾಸಂಧ ಭೀಮಸೇನನಿಗೆ ಮೀಸಲು. ಭೀಮಸೇನನಿಂದ ಅವನ ಸಂಹಾರ ನಡೆದು, ಆ ಪ್ರಯುಕ್ತ ಭೀಮಸೇನನ ಪಾಲಿಗೆ ಕೀರ್ತಿ ಮತ್ತು ಪುಣ್ಯ ಬರಬೇಕು – ಎಂಬುದು. ಭೀಮಸೇನ ಹನುಮಂತನಾಗಿದ್ದಾಗ, ರಾವಣ,ಕುಂಭಕರ್ಣರನ್ನು ಕೊಲ್ಲಲು ಸಮರ್ಥನಾಗಿದ್ದರೂ ರಾವಣ, ಕುಂಭಕರ್ಣರು ಶ್ರೀರಾಮಚಂದ್ರನಿಗೆ ಮೀಸಲು; ಅಂತಹವರನ್ನು ತಾನು ಕೊಂದು 'ಶ್ರೀರಾಮನಿಗೆ ತನ್ನ ಪತ್ನಿಯನ್ನು ಅಪಹರಿಸಿದವರನ್ನು ಕೊಲ್ಲಲು ಆಗಲಿಲ್ಲ; ಕಪಿಯ ಮೂಲಕ ಕೊಲ್ಲಿಸಿದ'– ಎಂಬ ಅಪಕೀರ್ತಿ ಬರುವುದಕ್ಕೆ ಅವಕಾಶ ನೀಡಬಾರದೆಂದು ರಾವಣಾದಿಗಳನ್ನು ಕೊಲ್ಲದೆ ಹಾಗೆಯೇ ಬಿಟ್ಟಿದ್ದ. ಹೀಗೆ ರಾಮಚಂದ್ರನಾಗಿದ್ದಾಗ ತನಗೆ 'ಮೀಸಲು' ಬಿಟ್ಟಿದ್ದಕ್ಕೆ ಪ್ರತಿಯಾಗಿ ಭಗವಂತ ಕೃಷ್ಣನಾದಾಗ ಭೀಮಸೇನನಾಗಿ ಅವತರಿಸಿದ್ದ ಹನುಮಂತನಿಗೆ ಜರಾಸಂಧನನ್ನು 'ಮೀಸಲು' ಆಗಿ ಬಿಟ್ಟಿದ್ದನು. ಭಗವಂತನಿಗೆ ನಾವು

ಏನನ್ನಾದರೂ 'ಮೀಸಲು' ಆಗಿಸಿದೆವೆಂದರೆ ನಮಗೂ ಅವನು 'ಮೀಸಲು' ಇಟ್ಟು ಅನುಗ್ರಹಿಸುವನು – ಎಂಬುದಕ್ಕೆ ಇದು ಉತ್ತಮ ನಿದರ್ಶನ.

ಭೀಮಸೇನ ಜರಾಸಂಧನ ದೇಹವನ್ನು ಇಪ್ಪತ್ತೊಂದು ಬಾರಿ ಸೀಳಿದಾಗಲೂ ಅದು ಮತ್ತೆ ಮತ್ತೆ ಜೊತೆಗೂಡುತ್ತಿತ್ತು. ಇಪ್ಪತ್ತೆರಡನೇ ಬಾರಿಯಷ್ಟೇ ಶ್ರೀಕೃಷ್ಣನ ಮಾರ್ಗದರ್ಶನ ಪಡೆದು ಮತ್ತೆ ಜೊತೆಗೂಡದಂತೆ ಸೀಳಲು ಸಮರ್ಥನಾದನು ಎಂದು ಮಹಾಭಾರತದ ಒಂದೆರಡು ಪ್ರತಿಗಳಲ್ಲಿ ಇದೆ, ಆದರೆ ಅದು ಅಪಪಾಠ. ಪೂನಾದ ಭಂಡಾರಕರ್ ಸಂಶೋಧನಾಸಂಸ್ಥೆಯ ಆಶ್ರಯದಲ್ಲಿ ಸಂಶೋಧಿಸಲ್ಪಟ್ಟ ಮಹಾಭಾರತದ ಪಾಠದ ಪ್ರಕಾರವೂ ಒಂದೆರಡು ಪ್ರತಿಗಳಲ್ಲಷ್ಟೇ ಆ ವಿಚಾರ ಇದ್ದು, ಅದನ್ನೊಳಗೊಂಡ ಮಹಾಭಾರತದ ಪಾಠ ಪ್ರಕ್ಷಿಪ್ತ. ಏಳ್ನೂರೈವತ್ತು ವರ್ಷಗಳಿಗಿಂತ ಮೊದಲು ನಡೆಸಿದ ಶ್ರೀಮದಾಚಾರ್ಯರ ಸಂಶೋಧನೆ ಎಷ್ಟು ಪ್ರಾಮಾಣಿಕ ಎಂಬುದು ಇದರಿಂದ ಸ್ಪಷ್ಟವಾಗಬಲ್ಲದು.

**'ಯಜ್ಞಾರ್ಥಾತ್ ಕರ್ಮಣೋಽನ್ಯತ್ರ ಲೋಕೋಽಯಂ ಕರ್ಮಬಂಧನಃ'** ಎಂಬ ಭಗವದ್ಗೀತೆ ಸಂದೇಶಿಸುತ್ತಿರುವಂತೆ ಭಗವಂತನ ಪ್ರೀತಿಗಾಗಿ ಆಚರಿಸಲ್ಪಟ್ಟಾಗಷ್ಟೇ ಕರ್ಮ ತಾರಕವಾಗುವುದು. ಭೀಮಸೇನ ಈ ಆದರ್ಶವನ್ನು ಪೂರ್ಣವಾಗಿ ಅಳವಡಿಸಿಕೊಂಡು ಬದುಕಿದವನು. ಭಾವೋದ್ವೇಗಕ್ಕೆ ಕಾರಣವಾಗಬಹುದಿದ್ದ ಜರಾಸಂಧನ ವಧೆಯನ್ನೂ ಶ್ರೀಕೃಷ್ಣನ ಪೂಜೆಗಾಗಿ ನೆರವೇರಿಸಿದ ಮಹಾಯೋಗಿ ಅವನು. ಆದುದರಿಂದಲೇ ತ್ರಿವಿಕ್ರಮಪಂಡಿತಾಚಾರ್ಯರು –

> **ನಿರ್ಮೃದ್ನನ್ನತ್ಯಯತ್ನಂ ವಿಜರವರ ಜರಾಸಂಧಕಾಯಾಸ್ಥಿಸಂಧೀನ್**
> **ಯುದ್ಧೇ ತ್ವಂ ಸ್ವಧ್ವರೇ ವಾ ಪಶುಮಿವ ದಮಯನ್ ವಿಷ್ಣುಪಕ್ಷದ್ವಿಡೀಶಮ್ ।**
> **ಯಾವತ್ ಪ್ರತ್ಯಕ್ಷಭೂತಂ ನಿಖಿಲಮಖಭುಜಂ ತರ್ಪಯಾಮಾಸಿಥಾಸೌ**
> **ತಾವತ್ಯಾಯೋಜಿ ತೃಪ್ತ್ಯಾ ಕಿಮು ವದ ಭಗವನ್ ರಾಜಸೂಯಾಶ್ವಮೇಧೇ ॥**

– ಎಂಬುದಾಗಿ ಯುಧಿಷ್ಠಿರ ರಾಜಸೂಯಯಾಗವನ್ನು ಸಮರ್ಪಿಸಿದಾಗ ಆದ ತೃಪ್ತಿಗಿಂತಲೂ ಭೀಮಸೇನನಿಂದ ನಡೆದ ಜರಾಸಂಧನ ಸಂಹಾರದ ಸಮರ್ಪಣೆಯಿಂದ ಅಧಿಕತೃಪ್ತಿ ಭಗವಂತನಿಗೆ ಆಗಿದೆ ಎಂದು ವರ್ಣಿಸಿರುವರು. ಯುಧಿಷ್ಠಿರನೇ ಮಹಾರಾಜ ಆಗಿದ್ದರೂ ಭೀಮಸೇನ ಯುವರಾಜನಾಗಿದ್ದುಕೊಂಡೇ ರಾಜ್ಯಭಾರಕ್ಕೆ ಬೇಕಾದ ಸೌಕರ್ಯವನ್ನೆಲ್ಲ ಒದಗಿಸಿಕೊಡುವ ಮೂಲಕ ಯುಧಿಷ್ಠಿರನಿಗಿಂತಲೂ ಅಧಿಕ ಕೀರ್ತಿಗೂ, ಪುಣ್ಯಕ್ಕೂ ಪಾತ್ರನಾಗಿರುವನು.

## ರಾಜಸೂಯಯಾಗದಲ್ಲಿ ಭೀಮಸೇನನ ಪಾತ್ರ

ಜರಾಸಂಧನ ಸಂಹಾರದ ಪರಿಣಾಮವಾಗಿ ರಾಜಸೂಯಯಾಗಾಚರಣೆಗೆ ತುಂಬ ಅನುಕೂಲವಾದ ವಾತಾವರಣ ಒದಗುವುದು. ರಾಜಸೂಯಯಾಗದ ಅಂಗವಾಗಿ ದಿಗ್ವಿಜಯ ನಡೆಸಬೇಕಿತ್ತು; ಯುಧಿಷ್ಠಿರ ಯಜ್ಞದೀಕ್ಷಿತನಾಗಿದ್ದ. ಉಳಿದ ಪಾಂಡವರು ಒಂದೊಂದು ದಿಕ್ಕಿನ ದಿಗ್ವಿಜಯ ನಡೆಸಬೇಕಾಗಿತ್ತು. ಶ್ರೀವೇದವ್ಯಾಸರ ನಿರ್ದೇಶನದಂತೆ ಪೂರ್ವದಿಕ್ಕಿನ ದಿಗ್ವಿಜಯವನ್ನು ನಡೆಸಲು ಭೀಮನೇ ಸಮರ್ಥ. ಪೂರ್ವದಿಕ್ಕಿನಲ್ಲಿ ಶಿಶುಪಾಲ, ಕರ್ಣ, ಪೌಂಡ್ರಕ ವಾಸುದೇವ, ವಿರಾಟರಾಜ – ಮುಂತಾದ ಪ್ರಬಲರಾಜರಿದ್ದು, ಅಂತಹ ಪೂರ್ವದಿಕ್ಕು ಒಂದು ದೃಷ್ಟಿಯಲ್ಲಿ ಪೂರ್ವಪಕ್ಷದಂತಿತ್ತು. ಶಿಶುಪಾಲಾದಿಗಳು ಜರಾಸಂಧನ ಶಿಷ್ಯರಾಗಿದ್ದರಿಂದ, ಅಂತಹ ಜರಾಸಂಧನ ವಧೆಯ ಪರಿಣಾಮವಾಗಿ ಶಿಶುಪಾಲಾದಿಗಳು ಭೀಮನ ಜೊತೆಗೆ ಕಾದಾಡದೆಯೇ ಕಪ್ಪ ಕಾಣಿಕೆ ನೀಡುವರು. ಶಿಶುಪಾಲನಂತೂ ಒಂದು ತಿಂಗಳ ಆತಿಥ್ಯವನ್ನು ನೀಡಿ ಭೀಮಸೇನನನ್ನು ಸತ್ಕರಿಸುವನು. ಭೀಮನು ಕೀಚಕನ ಬೆಂಬಲ ಪಡೆದಿದ್ದ ವಿರಾಟರಾಜನನ್ನೂ ಅನಾಯಾಸವಾಗಿ ಸೋಲಿಸಿ ಅವನಿಂದ ಕಪ್ಪಕಾಣಿಕೆ ಪಡೆಯುವನು. ಕರ್ಣನನ್ನೂ ಪರಾಭವಗೊಳಿಸಿ ಕಪ್ಪವನ್ನು ಸ್ವೀಕರಿಸುವನು. ಕರ್ಣನು ಆಗಿನ್ನೂ ಕವಚಕುಂಡಲಗಳನ್ನು ಹೊಂದಿದವನಾಗಿದ್ದು, ಆ ಪ್ರಯುಕ್ತ ಸಾಮರ್ಥ್ಯಾತಿಶಯದಿಂದ ಕೂಡಿದ್ದನು. ಆ ಸ್ಥಿತಿಯಲ್ಲೂ ಕರ್ಣನನ್ನು ಸೋಲಿಸಿದ್ದು ಭೀಮನ ~~ಕರ್ಣನ~~ ಹಿರಿಮೆ. ಮುಂದೆ ಮಹಾಭಾರತ ಯುದ್ಧದಲ್ಲಿ ಅರ್ಜುನ ಕರ್ಣನನ್ನು ಸೋಲಿಸುವಾಗ ಕರ್ಣ ಕವಚಕುಂಡಲಗಳನ್ನು ಹೊಂದಿರಲಿಲ್ಲ. ಎಂದರೆ ಭೀಮಸೇನನ ಸಾಮರ್ಥ್ಯ ಅರ್ಜುನನಿಗಿಂತ ನಿಶ್ಚಿತವಾಗಿಯೂ ಬಹು ಮಿಗಿಲು ಇದನ್ನು ಪಂಪ, ಕುಮಾರವ್ಯಾಸಾದಿಗಳು ಗಮನಿಸಿಯೇ ಇಲ್ಲ ಆದುದರಿಂದಲೇ ಅವರು ಭೀಮನಿಗಿಂತಲೂ ಕರ್ಣಾರ್ಜುನರಿಗೇ ಹೆಚ್ಚು ಪ್ರಾಶಸ್ತ್ಯ ನೀಡುವ ತಪ್ಪನ್ನು ಮಾಡಿರುವರು.

ಹಿಮಾಲಯದಲ್ಲಿ ಸಿಂಹವ್ಯಾಘ್ರಾದಿರೂಪಗಳಿಂದ ಬಂದ ರುದ್ರಗರುಡಾದಿ ದೇವತೆಗಳನ್ನೂ ಭೀಮಸೇನನು ಜಯಿಸುವನು.

ದಿಗ್ವಿಜಯದ ಬಳಿಕ ನಡೆದ ರಾಜಸೂಯಯಾಗದ ಅಗ್ರಪೂಜೆ ಶ್ರೀಕೃಷ್ಣನಿಗೆ ಸಂದಾಗ ಅದನ್ನು ಆಕ್ಷೇಪಿಸಿದ ಶಿಶುಪಾಲನನ್ನು ಭೀಮಸೇನನು ಪ್ರತಿಭಟಿಸಿದ್ದನು. ದೇವರ ನಿಂದೆಯನ್ನು ಕೇಳುವುದಿಲ್ಲ ಎಂಬುದು ಅವನ ವ್ರತವಾಗಿತ್ತು. ಯಾರಾದರೂ ದೇವರನ್ನು ನಿಂದಿಸಿದರೆ ಶಾಸ್ತ್ರದಿಂದ ಹಾಗೂ ಶಸ್ತ್ರದಿಂದ ಅವನು ಪ್ರತಿಭಟಿಸುತ್ತಿದ್ದನು.

## ದುರ್ಯೋಧನನ ಮಾನಭಂಗ

**'ದಂಭೋ ದರ್ಪೋಽಭಿಮಾನಶ್ಚ....'** ಎಂಬುದಾಗಿ ಗೀತೆಯಲ್ಲಿ ಹೇಳಿರುವ ಆಸುರೀಸಂಪತ್ತಿನ ದುರ್ಗುಣಗಳನ್ನು ಪೂರ್ಣಪ್ರಮಾಣದಲ್ಲಿ ಹೊಂದಿದ್ದವನು ದುರ್ಯೋಧನ. ಮಯನಿರ್ಮಿತ ಸಭೆಯನ್ನು ಪ್ರವೇಶಿಸುವಾಗ ಇಂದ್ರನೀಲಮಣಿಯ ಬಾಗಿಲನ್ನು ಗೋಡೆಯೆಂದೂ, ಸ್ಫಟಿಕಮಣಿಗಳ ಗೋಡೆಯನ್ನು ಬಾಗಿಲೆಂದೂ ಭ್ರಮಿಸಿ, ಅದನ್ನು ಹಾಯ್ದು ಪೆಟ್ಟು ತಿನ್ನುವನು. ವಿಳಂಬವಾಗಿ ಬಂದುದಲ್ಲದೇ ಪಾಂಡವರ ವೈಭವವನ್ನು ಸಹಿಸದೆ ಮಧ್ಯೆದಲ್ಲೇ ಎದ್ದ ಅವನು ನಕುಲನನ್ನು ಜೊತೆಗೆ ಕಳುಹಿಸಿಕೊಡುವುದಾಗಿ ಯುಧಿಷ್ಠಿರ ತಿಳಿಸಿದರೂ ನಿರಾಕರಿಸಿ ತಮ್ಮಂದಿರ ಜೊತೆಗೆ ತಾನೇ ಹೊರಡುವನು. ಇಂದ್ರನೀಲಮಣಿಗಳಿಂದ ರಚಿತವಾಗಿದ್ದ ನೆಲವನ್ನು ಸರೋವರ ಎಂದು ಭ್ರಮಿಸಿ, ಬಟ್ಟೆಯನ್ನು ಮೇಲಕ್ಕೆತ್ತಿಕೊಂಡು ಸಾಗುವನು. ಸ್ವಲ್ಪ ದೂರ ಹೋದಾಗ ಸಿಗುವ ಸರೋವರವನ್ನು ಹಿಂದೆ ಕಾಣಿಸಿಕೊಂಡ ನೆಲದಂತೆಂದು ಭ್ರಮಿಸಿ ನೀರೊಳಗೆ ಬೀಳುವನು. ಅವನೊಂದಿಗೆ ಅವನ ತಮ್ಮಂದಿರೂ ಬೀಳುವರು. **'ಅಂಧೇನೈವ ನೀಯಮಾನಾ ಯಥಾಂಧಾಃ'** – ಕುರುಡನಿಂದ ಕರೆದೊಯ್ಯಲ್ಪಡುವ ಕುರುಡರಂತೆ ಎಂಬ ಉಪನಿಷತ್ತಿನ ಮಾತಿಗೆ ಇದು ಒಳ್ಳೆಯ ದೃಷ್ಟಾಂತವೆನಿಸಬಹುದಾಗಿದೆ.

ಹೀಗೆ ನೆಲಜಲಗಳ ಅಂತರವನ್ನು ವಿವೇಚಿಸಿಕೊಳ್ಳಲಾಗದ ದುರ್ಯೋಧನನಲ್ಲಿ ಪಾಂಡವರ ರಾಜ್ಯ, ತಮ್ಮ ರಾಜ್ಯಗಳ ಅಂತರವನ್ನು ವಿವೇಚಿಸಿಕೊಳ್ಳುವ ವಿವೇಕ ಹೇಗೆ ತಾನೇ ಇದ್ದೀತು ?

ದುರ್ಯೋಧನ ಬಿದ್ದದ್ದನ್ನು ಕಂಡು ಭೀಮಸೇನ ಗಟ್ಟಿಯಾಗಿ ನಗುವನು. **'ವಾಯುರ್ಭೀಮೋ ಭೀಮನಾದೋ ಮಹೌಜಾಃ..'** ಎಂದಿರುವಂತೆ ಗಟ್ಟಿಯಾದ ನಾದ ಉಳ್ಳ ಭೀಮಸೇನ ಅಂತಹ ನಾದವನ್ನು ಅಳವಡಿಸಿಕೊಂಡು ನಗುವನು. ದೂರದರ್ಶನದಲ್ಲಿ ದ್ರೌಪದಿ ಮಾತ್ರ ನಗುವಳೆಂದು ತೋರಿಸಲಾಗಿದೆ. ಆದರೆ ಭೀಮಸೇನ ನಕ್ಕಮೇಲೆ ದ್ರೌಪದಿ ನಕ್ಕಿರುವಳಷ್ಟೇ. ಭೀಮಸೇನನಾದರೋ ಶ್ರೀಕೃಷ್ಣನಿಂದ ಸೂಚಿತನಾಗಿ, ಮುಂದೆ ಕಪಟದ್ಯೂತ ಮುಂತಾದುವುದಕ್ಕೆ ಪೀಠಿಕೆಯ ನಿರ್ಮಾಣಕ್ಕೆ ಅನುಕೂಲವಾಗುವಂತೆ ನಗುವನು :

**'ತಂ ಪ್ರಾಹಸದ್ ಭಗವತಾ ಕ್ಷಿತಿಭಾರನಾಶಹೇತೋಃಸುಸೂಚಿತ ಉರುಸ್ವರತೋಽತ್ರಭೀಮಃ'**

ಹೀಗೆ ಭೀಮದ್ರೌಪದಿಯರು ದುರ್ಯೋಧನ ಬಿದ್ದ ಬಗ್ಗೆ ನಕ್ಕದ್ದು ತಪ್ಪು ಎಂದು ಕೆಲವರು ವಾದಿಸುವುದುಂಟು. ದುರ್ಯೋಧನ ಒಂದು ವೇಳೆ ಗೊತ್ತಿಲ್ಲದೆ

ಬಿದ್ದಿದ್ದರೆ ಅದು ಅಪಹಾಸಕ್ಕೆ ಪ್ರಯೋಜಕವಾಗುತ್ತಿರಲಿಲ್ಲ ಚಿಕ್ಕ ಮಕ್ಕಳು ಬಿದ್ದಾಗ ಯಾರೂ ನಗುವುದಿಲ್ಲ. ಆದರೆ ಅದೇ ಸಿನಿಮಾ ಹಾಡುಗಳನ್ನು ಹಾಡುತ್ತಾ ಎಲ್ಲೆಲ್ಲೋ ನೋಡಿಕೊಂಡು ಬೀಳುವ ಪ್ರೌಢರನ್ನು ಕಂಡು ಎಲ್ಲರೂ ನಗುವರು. ಅದರಂತೆ ದುರ್ಯೋಧನ 'ರಾಜ' ಎಂಬ ಗರ್ವಕ್ಕೊಳಗಾಗಿ ಬಿದ್ದದ್ದರಿಂದ ಆ ಬಗ್ಗೆ ಭೀಮಾದಿಗಳು ನಕ್ಕಿರುವರಷ್ಟೇ.

ಭೀಮನ ನಗುವನ್ನು ಶ್ರೀಕೃಷ್ಣನೂ ಅನುಮೋದಿಸುವನು. ಭೀಮ ನಕ್ಕರೂ ಕೃಷ್ಣ ಅವನಿಗೆ ಉತ್ತೇಜನ ನೀಡುವನು. ಆದರೆ ಅರ್ಜುನ ಅತ್ತರೂ ಕೃಷ್ಣ ಅವನ ಬಗ್ಗೆ ಅನುಕಂಪ ತೋರಿಸುವ ಬದಲು ಗದರುವನು. **'ಅಶೋಚ್ಯಾನನ್ವಶೋಚಸ್ತ್ವಂ..'** ಎಂದು ತಿಳಿ ಹೇಳುವನು.

ರಾಮಾಯಣದಲ್ಲಿ ಶೂರ್ಪನಖಿಯ ಮೂಗನ್ನು ಕೊಯ್ದದ್ದು ಮುಂದಿನ ರಾವಣಾದಿಗಳ ಸಂಹಾರಕ್ಕೆ ಹೇಗೆ ನಾಂದಿಯಾಯಿತೋ ಹಾಗೇ ದುರ್ಯೋಧನ ಮಯಸಭೆಯಲ್ಲಿ ಬಿದ್ದಾಗ ಭೀಮದ್ರೌಪದಿಯರು ನಕ್ಕಿದ್ದು ಮುಂದಿನ ಕಪಟದ್ಯೂತ, ವನವಾಸ, ಅಜ್ಞಾತವಾಸ, ಮಹಾಭಾರತಯುದ್ಧ – ಈ ಎಲ್ಲ ಘಟನೆಗಳಿಗೆ ನಾಂದಿಯಾಯಿತು.

ದುರ್ಯೋಧನಾದಿಗಳು ಬಿದ್ದಾಗ ಕೃಷ್ಣಪತ್ನಿಯರೇ ಮುಂತಾದವರೂ ನಕ್ಕರಾದರೂ ದುರ್ಯೋಧನಾದಿಗಳ ವಿಶೇಷವಾದ ಕ್ರೋಧ ಭೀಮ ಮತ್ತು ದ್ರೌಪದಿಯರ ಮೇಲೆಯೇ –**'ಕೃಷ್ಣಾವೃಕೋದರಗತಂ ಬಹುಲಂ ನಿಧಾಯ ಕ್ರೋಧಂ ಯಯೌ ಸಶಕುನಿರ್ಧೃತರಾಷ್ಟ್ರಪುತ್ರಃ'** ದ್ರೌಪದಿ ಎಂದರೆ ವಿದ್ಯೆ, ಭೀಮಸೇನ ಎಂದರೆ ಜ್ಞಾನ. ಕಲಿಸ್ವರೂಪಿಯಾದ ದುರ್ಯೋಧನನಿಗೆ ಜ್ಞಾನ, ವಿದ್ಯೆಗಳ ವಿಷಯದಲ್ಲಿ ಯೇ ಅಧಿಕ ಕ್ರೋಧ, ದ್ವೇಷ.

## ಕಪಟದ್ಯೂತದ ಸಂಚು

ಹೀಗೆ ಅವಮಾನಿತನಾದ ದುರ್ಯೋಧನ ವಂಚನೆಗೆ ಇಳಿಯುವನು. ಇದು ವೀರರ ಲಕ್ಷಣವಲ್ಲ. ಆಟದಲ್ಲಿ ಸೋತ ವ್ಯಕ್ತಿ ಮುಂದಿನ ಆಟದಲ್ಲಿ ಗೆದ್ದು ಹಿಂದಿನ ಸೋಲಿನ ಅಪಯಶಸ್ಸನ್ನು ತೊಳೆದುಕೊಳ್ಳಬೇಕೇ ಹೊರತು ಆಟದಲ್ಲಿ ಸೋತಕೂಡಲೇ ಕಲ್ಲು ಹೊಡೆಯುವುದೇ ಮುಂತಾದ ಹಿಂಸಾಚಟುವಟಿಕೆಗಳಿಂದಲ್ಲ. ದುರ್ಯೋಧನ ನಿಜವಾದ ವೀರನಾಗಿದ್ದರೆ ಆಗ ಅವನು ಯುದ್ಧ ಘೋಷಣೆ ಮಾಡಬೇಕಿತ್ತು . ಅದರ ಬದಲಾಗಿ, ಅವನು ವಂಚನೆಗೆ ಇಳಿದು, ಆ ಹಾದಿಯಲ್ಲಿ

ದ್ಯೂತವನ್ನು ಆರಿಸಿಕೊಳ್ಳುವನು. **'ದ್ಯೂತಂ ಪಾನಂ ಸ್ತ್ರಿಯಃ ಸೂನಾ..'** ಎಂಬುದಾಗಿ ಭಾಗವತದಲ್ಲಿ ದ್ಯೂತವನ್ನು ಕಲಿಯ ಪ್ರಧಾನ ನೆಲೆಯನ್ನಾಗಿ ನಿರ್ದೇಶಿಸಲಾಗಿದೆ. ಅಂತಹ ದ್ಯೂತವನ್ನೇ ದುರ್ಯೋಧನ ತನ್ನ ಉದ್ದೇಶಸಾಧನೆಗೆ ಆಯ್ಕೆ ಮಾಡಿಕೊಂಡಿರುವುದರಿಂದ **'ಭಾರತಾರ್ಥವಿನಿರ್ಣಯಃ'** ಎಂದು ಹೇಳಿರುವಂತೆ ಭಾಗವತದ ಆ ಸಂದೇಶದಿಂದಾಗಿ ಮಹಾಭಾರತದಲ್ಲಿ ನಿರೂಪಿತವಾದ ದುರ್ಯೋಧನನ ದ್ಯೂತದ ಪ್ರವೃತ್ತಿಯ ಹಿನ್ನೆಲೆಯನ್ನು ನಿರೂಪಿಸಿದಂತಾಗುತ್ತದೆ.

ದುರ್ಯೋಧನ ದ್ಯೂತಕ್ಕೆ ಆಹ್ವಾನಿಸಿದಾಗ ಯುಧಿಷ್ಠಿರ ಅದಕ್ಕೆ ಒಪ್ಪಿಕೊಂಡು ಬಿಡುವನು. ಕಲಿಯ ಪ್ರಭಾವಕ್ಕೆ ಕೆಲವೊಮ್ಮೆ ಧರ್ಮ ತಲೆಬಾಗುವುದು. ದುರ್ಯೋಧನ ತಾನು ನೇರವಾಗಿ ದ್ಯೂತ ಆಡುವುದಿಲ್ಲ. ಅವನ ಪರವಾಗಿ ಶಕುನಿ ಆಡುವನು. ಅವನು ಅವನಿಗೆ ಪ್ರಚೋದಿಸುವವನಷ್ಟೇ. ಕಲಿ ನೇರವಾಗಿ ತನ್ನ ಪ್ರಭಾವ ಬೀರುವವನಲ್ಲ. **'ನಾಸ್ತಿಕ್ಯಂ ಶಕುನಿರ್ನಾಮ..'** – ಎಂದಿರುವಂತೆ ಶಕುನಿ ಸಂಕೇತಿಸುವ ನಾಸ್ತಿಕ್ಯವನ್ನು ಮುಂದೆ ಮಾಡಿ ತನ್ನ ಪ್ರಭಾವವನ್ನು ಬೀರುವನು.

ದುರ್ಯೋಧನ ದ್ಯೂತಕ್ಕೆ ಆಹ್ವಾನಿಸಿ, ತಾನು ಆಡುವುದಿಲ್ಲ; ತನ್ನ ಪರವಾಗಿ ಶಕುನಿ ಆಡುವನೆಂದಾಗ ಅದಕ್ಕೆ ಯುಧಿಷ್ಠಿರ ಒಪ್ಪಿಕೊಂಡು ಬಿಡುವನು. ಇದೇ ಯುಧಿಷ್ಠಿರ ಮಾಡಿದ ದೊಡ್ಡ ತಪ್ಪು. ಅವನು ಬೇರೆಯವರ ಜೊತೆಗೆ ಆಟ ಆಡಲು ಒಪ್ಪಿಕೊಳ್ಳಬಾರದಿತ್ತು. ಅಥವಾ ನಿನ್ನ ಪರವಾಗಿ ಶಕುನಿ ಆಡುವುದೆಂದರೆ ನನ್ನ ಪರವಾಗಿ ಭೀಮಸೇನ ಆಡುವನೆಂದು ಹೇಳಬೇಕಿತ್ತು. 'ಸರ್ವಜ್ಞನಾದ ಭೀಮಸೇನ ಒಂದು ವೇಳೆ ದ್ಯೂತ ಆಟವನ್ನು ನಡೆಸಿದ್ದರೆ ಅವನು ಗೆದ್ದೇ ಗೆಲ್ಲುತ್ತಿದ್ದ. ಆದರೆ ಯುಧಿಷ್ಠಿರ ಎದುರಿಗೇ ಇದ್ದ ಭೀಮಸೇನನನ್ನು ಬಳಸಿಕೊಂಡಿಲ್ಲ. ಆದ್ದರಿಂದಲೇ ಆಪತ್ತಿಗೆ ಒಳಗಾದ. ಅಂತಹ ಭೀಮಸೇನನನ್ನು ಸಂಕೇತಿಸುವಂತಹದ್ದು **'ರೂಪಮನ್ಯದಿವ ಧನ್ಯಮಾತ್ಮನಃ'** ಎಂದು ನಿರೂಪಿತವಾಗಿರುವಂತಹ ಶ್ರೀಮದಾಚಾರ್ಯರ **'ಸರ್ವಮೂಲಗ್ರಂಥಗಳು'**. ಇವು ನಮ್ಮ ಎದುರೇ ಇದ್ದರೂ ಅವನ್ನು ಬಳಸಿಕೊಳ್ಳದೆ ನಾವು ಯುಧಿಷ್ಠಿರನಂತೆ ಕಲಿಯ ಆಕ್ರಮಣಕ್ಕೆ ಒಳಗಾಗಿ ಪರಿತಪಿಸುತ್ತಿದ್ದೇವೆ. ಭೀಮನ ಹಿರಿಮೆಯನ್ನು ಬಳಸಿಕೊಳ್ಳದ ಯುಧಿಷ್ಠಿರ ಸೋತಂತೆ, ಸರ್ವಮೂಲವನ್ನು ಬಳಸಿಕೊಳ್ಳದಿದ್ದಲ್ಲಿ ನಮ್ಮ ಜೀವನದಲ್ಲೂ ಸೋಲು ಖಚಿತ.

## ದ್ಯೂತಪ್ರಸಂಗದಲ್ಲಿ ಭೀಮಸೇನನ ಹಿರಿಮೆ

ದ್ಯೂತದಲ್ಲಿ ತೊಡಗಿದ ಯುಧಿಷ್ಠಿರ ಪಣಕ್ಕಿಟ್ಟು ಎಲ್ಲವನ್ನೂ ಕಳೆದುಕೊಳ್ಳುವನು. ಕೊನೆಗೆ ಭೀಮನನ್ನೂ ಪಣಕ್ಕಿಟ್ಟು ಸೋಲುವನು. ರಾಮಚಂದ್ರ ದುರ್ಬಲನಾದ ತಂದೆ ದಶರಥನ ಮಾತಿಗೆ ಬೆಲೆ ಕೊಟ್ಟಂತೆ ಭೀಮ ದುರ್ಬಲನಾದ ಅಣ್ಣ ಧರ್ಮರಾಜನ ಮಾತನ್ನು ಗೌರವಿಸುವನು. ಪಿತೃಭಕ್ತಿಗೆ ರಾಮಚಂದ್ರ ಆದರ್ಶವೆನಿಸಿದರೆ, ಭ್ರಾತೃವಾತ್ಸಲ್ಯಕ್ಕೆ ಭೀಮಸೇನ ಆದರ್ಶ.

ಮುಂದಿನ ಕಥಾಭಾಗ ಪ್ರಸಿದ್ಧ. ಮಹಾರಾಣಿಯಾದ ದ್ರೌಪದಿ ರಜಸ್ವಲೆಯಾಗಿದ್ದಾಗಲೂ ತುಂಬಿದ ಸಭೆಗೆ ಎಳೆದು ತಂದು ಅವಾಚ್ಯ ಶಬ್ದಗಳಿಂದ ಬೈದಿರುವುದು ಜಗತ್ತು ಕಂಡ ಅಕ್ಷಮ್ಯ ಅಪರಾಧ. ಪಾರ್ಲಿಮೆಂಟ್ ಭವನದಲ್ಲೋ ಅಸೆಂಬ್ಲಿ ಹಾಲಲ್ಲೋ ಇಂತಹ ಅಪರಾಧ ನಡೆದರೆ ಹೇಗೋ ಹಾಗೆ. ಈ ದಿನಗಳಲ್ಲೂ ಇನ್ನೂ ಇಂತಹ ಅಪರಾಧ ನಡೆಯುತ್ತಿಲ್ಲ.

ಜನ ತಪ್ಪಾಗಿ ತಿಳಿದಿರುವಂತೆ ದ್ರೌಪದೀ ಹತಾಶಳಾಗಿ ನಡೆದುಕೊಂಡಿಲ್ಲ. ಧೀರೋದಾತ್ತ ಸ್ತ್ರೀಯಾಗಿ ಕ್ಷತ್ರಿಯೋಚಿತ ಸ್ತ್ರೀಯಾಗಿ ನಡೆದುಕೊಂಡಿರುವಳು. ಸ್ತ್ರೀಯರು ಅನ್ಯಾಯವನ್ನು ಪ್ರತಿಭಟಿಸುವಾಗ ದ್ರೌಪದಿಯಂತೆ ನಡೆದುಕೊಂಡರೆ ಯಶಸ್ಸನ್ನು ಗಳಿಸಬಹುದು.

**ನ ಸಾ ಸಭಾ ಯತ್ರ ನ ಸಂತಿ ವೃದ್ಧಾ ನ ತೇ ವೃದ್ಧಾ ಯೇ ನ ವದಂತೀಹ ಧರ್ಮಮ್ ।**
**ನ ತತ್ ಧರ್ಮಂ ಯತ್ ಸತ್ಯೇನ ಹೀನಂ ನ ತತ್ ಸತ್ಯಂ ಯಚ್ಛಲೇನಾಭ್ಯುಪೇತಮ್ ॥**

ಪ್ರಾಮಾಣಿಕತೆ ಇಲ್ಲದ್ದು ಸತ್ಯ ಎನ್ನಿಸದು; ಸತ್ಯದಿಂದ ದೂರವಾದದ್ದು ಧರ್ಮ ಆಗದು; ಧರ್ಮವನ್ನು ಹೇಳದವರು ವೃದ್ಧರೆನಿಸರು; ವೃದ್ಧರಿಲ್ಲದುದು ಸಭೆಯೇ ಆಗದು – ಎಂಬುದಾಗಿ ದ್ರೌಪದಿ ಭೀಷ್ಮ ದ್ರೋಣಾದಿಗಳೆದುರೇ ಅವರ ಧರ್ಮಪ್ರಜ್ಞೆಯ ಬಗ್ಗೆ ಸವಾಲು ಹಾಕುವಷ್ಟು ಧೀರತನದಿಂದ ವಾದಿಸುವಳು. ಭೀಷ್ಮದ್ರೋಣಾದಿಗಳ ಎದುರು ಧರ್ಮದ ಬಗ್ಗೆ ಇಂತಹ ಮಾತುಗಳನ್ನು ಹೇಳಬೇಕಾದರೆ ಆಕೆ ಎಷ್ಟು ಧರ್ಮಪ್ರಜ್ಞೆ ಹೊಂದಿದವಳಾಗಿದ್ದಳೆಂಬುದು ಸ್ಪಷ್ಟವಾಗಬಲ್ಲುದು. ಭೀಷ್ಮರು ಪರಶುರಾಮನಲ್ಲಿ, ಬೃಹಸ್ಪತ್ಯಾಚಾರ್ಯರಲ್ಲಿ ಒಟ್ಟಾಗಿ **525** ವರ್ಷ ವಿದ್ಯಾಭ್ಯಾಸ ನಡೆಸಿದವರು. ದ್ರೋಣರಂತೂ ಸ್ವತಃ ಬೃಹಸ್ಪತಿಯ ಅವತಾರ. ಅಂತಹವರೂ ಉತ್ತರಿಸಲು ಬಾರದಂತೆ ದ್ರೌಪದಿ ಮಾತನಾಡಿದಳೆಂದರೆ ಆಕೆಯು ವಿದ್ಯಾಭಿಮಾನಿನಿಯಾದ ಭಾರತಿ ಎಂಬುದು ಖಚಿತಪಡುವುದು.

ದ್ರೌಪದಿಗೆ ಆದ ಅನ್ಯಾಯವನ್ನು ವಿದುರ ಪ್ರತಿಭಟಿಸುವನು. ಪಾಂಡವರಲ್ಲಿ ಯುಧಿಷ್ಠಿರನಾಗಲೀ, ಅರ್ಜುನನಾಗಲೀ ಸ್ವಲ್ಪವೂ ಪ್ರತಿಭಟಿಸುವುದಿಲ್ಲ. ಆಗ ಸರಿಯಾದ ಪ್ರತಿಭಟನೆ ಸಲ್ಲಿಸುವವನು ಭೀಮಸೇನ ಮಾತ್ರ ಕೂಡಲೇ ಎದ್ದು ನಿಂತು 'ಇಷ್ಟೆಲ್ಲ ಅನರ್ಥಕ್ಕೆ ಕಾರಣನಾದ ಯುಧಿಷ್ಠಿರನ ಕೈಗಳನ್ನು ಸುಟ್ಟುಹಾಕಿ ಬಿಡುವೆನು'' ಎನ್ನುವನು:

**ಉತ್ತಮೇ ವಚಸಾ ಶಿಕ್ಷಾ ಮಧ್ಯಮೇಽರ್ಥಾಪಹಾರಣಮ್।**
**ಅಧಮೇ ದೇಹದಂಡಶ್ಚ ತಸ್ಮಾದ್ ವಾಚ್ಯೋ ಯುಧಿಷ್ಠಿರಃ॥**

ಅರ್ಜುನ ಭೀಮಸೇನ್ನನನ್ನು ಸಮಾಧಾನಿಸಲು ತೊಡಗಿದಾಗ ಭೀಮಸೇನ ತನ್ನ ನಿಲುವನ್ನು ಸ್ಪಷ್ಟಪಡಿಸುವನು. ಹಿರಿಯರಿಗೆ ಮಾತಿನ ಮೂಲಕವಷ್ಟೇ ದಂಡನೆ, ಮಾತಿನ ಮೂಲಕದ ದಂಡನೆಯಿಂದಲೇ ಅವರು ತಮ್ಮ ತಪ್ಪನ್ನು ಸರಿಪಡಿಸಿಕೊಳ್ಳುವರು. ಅವರಿಗೆ ದೈಹಿಕ ದಂಡನೆಯ ಅವಶ್ಯಕತೆ ಇಲ್ಲ. ಮಧ್ಯಮರಿಗೆ ಅರ್ಥದಂಡ; ಚಿಕ್ಕವರಿಗೆ ದೇಹದಂಡವೇ. ಅಣ್ಣನಾದ ಯುಧಿಷ್ಠಿರನಿಗೂ ಮಾತಿನ ಮೂಲಕವಷ್ಟೇ ತಾನು ದಂಡನೆ ನೀಡುವುದೆಂದು ಭೀಮಸೇನ ತಿಳಿಸುವನು. ಭೀಮಸೇನನಿಗೆ ಯುಧಿಷ್ಠಿರನ ಮೇಲೆ ಗೌರವ ಭಾವನೆ ಇತ್ತು. ಆದರೆ ಅದು ಕುರುಡು ವ್ಯಾಮೋಹವಾಗಿದ್ದಿರಲಿಲ್ಲ. ಆದುದರಿಂದಲೇ ಅವನು ತಪ್ಪು ಮಾಡಿದಾಗ ಅದನ್ನು ತಪ್ಪು ಎಂದು ಭೀಮಸೇನನು ಉದ್ಘೋಷಿಸುವನು. ಇದೇನೂ ಭೀಮಸೇನನ ಭಾವೋದ್ವೇಗದ ಪ್ರತಿಕ್ರಿಯೆ ಅಲ್ಲ; ತಾತ್ತ್ವಿಕಚಿಂತನೆಯ ಪ್ರವೃತ್ತಿ.

ಆಗ ದುರ್ಯೋಧನ ಪಾಂಡವರಲ್ಲಿ ಒಡಕು ಉಂಟು ಮಾಡಬೇಕೆಂದು ಒಂದು ಕುತಂತ್ರ ಹೂಡುವನು. ಯುಧಿಷ್ಠಿರ, ಭೀಮ, ಅರ್ಜುನರ ನಡುವೆ ಭಿನ್ನಾಭಿಪ್ರಾಯ ಬಂದಿರುವುದನ್ನು ಗಮನಿಸಿ ಇದರ ದುರ್ಲಾಭ ಪಡೆದುಕೊಳ್ಳಬೇಕೆಂದು ಕೂಡಲೇ ದುರ್ಯೋಧನ ಎದ್ದು ನಿಲ್ಲುವನು. 'ಭೀಮಾದಿಯಾಗಿ ನಾಲ್ಕು ಜನ ತಮ್ಮಂದಿರೂ ಯುಧಿಷ್ಠಿರ ನಮಗೆ ಪೂಜ್ಯನಲ್ಲ' ಎಂದರೆ ರಾಜ್ಯವನ್ನೆಲ್ಲ ಅವರಿಗೆ ಮರಳಿ ಕೊಡುವೆನು ಎನ್ನುವನು. ಭೀಮಾರ್ಜುನರು ಇಬ್ಬರು ಹೀಗೆ ಹೇಳಿದರೂ ಸಾಕು, ಭೀಮನೊಬ್ಬನೇ ಹೇಳಿದರೂ ಸಾಕು, ಎಂದು ದುರ್ಯೋಧನ ಹೇಳುವನು.

ಪಾಂಡವರಲ್ಲಿ ಒಡಕು ಹುಟ್ಟಿಸುವ ಕೆಟ್ಟ ಉದ್ದೇಶವನ್ನು ಗುರುತಿಸಿ ತಕ್ಷಣ ಎದ್ದು ನಿಂತ ಭೀಮಸೇನ ಗುಡುಗುವನು –ಯುಧಿಷ್ಠಿರ ನಮಗೆಲ್ಲ ಪೂಜ್ಯ; ಅಷ್ಟೇ ಅಲ್ಲ

ಇಲ್ಲಿರುವ ಎಲ್ಲರಿಗೂ ಅವನು ಪೂಜ್ಯನು ಏಕೆಂದರೆ ನನಗೆ ಯುಧಿಷ್ಠಿರ ಪೂಜ್ಯನಾಗಿರುವುದರಿಂದ ನಿಮಗೆಲ್ಲರಿಗೂ ಪೂಜ್ಯ ಆಗಲೇಬೇಕು. ಇದು ಅನುಮಾನತೀರ್ಥರ ಅನುಮಾನ. ನಾನು ನಿಮಗೆಲ್ಲ ಗುರುಸ್ಥಾನದಲ್ಲಿದ್ದವನಾಗಿ ಪೂಜ್ಯ ಎನಿಸುವೆನು. ಏಕೆಂದರೆ **'ಯತೋ ಹಿ ಬಲಜ್ಯೇಷ್ಠಂ ಕ್ಷತ್ರಮಾಹುರ್ಮಹಾಂತಃ..'** – ಬ್ರಾಹ್ಮಣರಲ್ಲಿ ಪೂಜ್ಯತೆಗೆ ಹೇಗೆ ಜ್ಞಾನಾಧಿಕ್ಯವು ಮಾನದಂಡವೋ ಹಾಗೆ ಕ್ಷತ್ರಿಯರಲ್ಲಿ ಪೂಜ್ಯತೆಗೆ ಬಲಾಧಿಕ್ಯವು ಮಾನದಂಡ. ನಿಮಗೆಲ್ಲರಿಗಿಂತ ಅಧಿಕಬಲ ನನ್ನಲ್ಲಿದೆ. ಈ ವರೆಗೆ ನಡೆದ ಘಟನೆಗಳ ಪರಿಶೀಲನೆಯಿಂದಲೇ ಇದು ಸ್ಪಷ್ಟವಾಗಬಲ್ಲದು. ಬೇಕಿದ್ದರೆ ಈಗಲೇ ಎಲ್ಲರೂ ಒಟ್ಟಾಗಿ ಎದ್ದು ಹೋರಾಟಕ್ಕೆ ಬನ್ನಿ; ಯಾವುದೇ ಆಯುಧವಿಲ್ಲದೆ, ಅಂಗಾಲಿನಿಂದ ಹೊಸಕಿ ಹಾಕಿಬಿಡುವೆನು:

**ಬಲಜ್ಯೈಷ್ಠ್ಯೇ ಯದಿ ವಃ ಸಂಶಯಃ ಸ್ಯಾದುತ್ತಿಷ್ಠಧ್ವಂ ಸರ್ವ ಏವಾದ್ಯ ವೀರಾಃ ।**
**ಮೃತ್ನಾಮಿ ವಃ ಪಾದತಲೇನ ಸರ್ವಾನ್ಸಹಾನುಬಂಧಾನ್ ಯಶ್ಚ ಮಾಂ ಯೋದ್ಧುಕಾಮಃ ॥**

ಹೀಗೆ ಭೀಮಸೇನ ಗುಡುಗಿದಾಗ ಭೀಷ್ಮಾದಿಗಳು ಬಂದು ಅವನ ಕೈಗಳನ್ನು ಹಿಡಿದು ಸಮಾಧಾನಿಸುವರು. **'ಸರ್ವಂ ಸಂಭಾವ್ಯತೇ ತ್ವಯಿ'** ಎಂದು ನುಡಿದು ಅವನ ಹಿರಿಮೆಯನ್ನು ಒಪ್ಪಿಕೊಳ್ಳುವನು.

ಇದು ಭೀಮಸೇನನ ಬಲದ ಪರಾಕಾಷ್ಠೆಯನ್ನು ಸ್ಪಷ್ಟಪಡಿಸುವಂತಹದ್ದು. ಮಹಾಭಾರತದ ಎಲ್ಲ ಪ್ರತಿಗಳಲ್ಲೂ ಈ ಕಥಾಭಾಗ ಇದ್ದೇ ಇದೆ. ಆದರೆ ಟಿ.ವಿ. ಮಹಾಭಾರತದಲ್ಲಿ ತೋರಿಸಿಲ್ಲ, ಪಂಪ, ಕುಮಾರವ್ಯಾಸ ಮುಂತಾದ ಕವಿಗಳ ಕೃತಿಗಳಲ್ಲೂ ಇದರ ಉಲ್ಲೇಖ ಬಿಟ್ಟು ಹೋಗಿದೆ.

**'ಭೀಮಸೇನಸಮೋ ನಾಸ್ತಿ ಸೇನಯೋರುಭಯೋರಪಿ..'** ಎಂಬುದನ್ನು ಈ ಪ್ರಸಂಗ ಇನ್ನಷ್ಟು ಸ್ಪಷ್ಟಪಡಿಸಬಲ್ಲದು.

## ಭೀಮಪ್ರತಿಜ್ಞೆ

ದುರ್ಯೋಧನ ಈ ಸನ್ನಿವೇಶದ ದುರ್ಲಾಭ ಪಡೆದುಕೊಳ್ಳುವನು. ತಾನು ಏನು ಮಾಡಿದರೂ ಭೀಮಸೇನ ಹಾನಿ ಮಾಡದಂತೆ ಆಗ ಭೀಷ್ಮಾದಿಗಳು ರಕ್ಷಣೆ ನೀಡುವರೆಂದು ಅವನಿಗೆ ಧೈರ್ಯ ಬಂತು. ಇದರಿಂದಾಗಿ ಅವನು ಇನ್ನಷ್ಟು ಕೆಟ್ಟದಾಗಿ ನಡೆದುಕೊಳ್ಳುವನು. ತನ್ನ ತೊಡೆ ತೋರಿಸಿ ಅದನ್ನು ಏರಲು ದ್ರೌಪದಿಗೆ ಸೂಚಿಸುವನು. ಕೂಡಲೇ ಭೀಮಸೇನ **'ತವೋರುಮೇನಂ ಗದಯೋರುವೇಗಯಾ**

**ವಿಭೇತ್ಸ್ಯೇ..'** ನಿನ್ನ ತೊಡೆಯನ್ನು ಗದೆಯಿಂದ ಮುರಿದು ಹಾಕುವೆನು ಎಂದು ಪ್ರತಿಜ್ಞೆ ಮಾಡುವನು. ದ್ಯೂತದಲ್ಲಿ ಇನ್ನೇನೂ ಪಣಕ್ಕೆ ಇಡಲಿಕ್ಕೆ ಇಲ್ಲವೆಂದರೆ **'ದ್ಯೂತೇ ಕೃಷ್ಣಂ ಸ್ಥಾಪಯಧ್ವಂ ಪಣಾಯ'** ಕೃಷ್ಣನನ್ನೇ ಪಣಕ್ಕಿಡು ಎಂದು ದುರ್ಯೋಧನ ಯುಧಿಷ್ಠಿರನಿಗೆ ತಿಳಿಸಲು ಭೀಮಸೇನ ಮತ್ತೊಂದು ಪ್ರತಿಜ್ಞೆ ಮಾಡುವನು – **'ನಿಪಾತ್ಯ ಭೂತಲೇ ಹಿ ತೇ ಮೃದಿಷ್ಯೇ'** ಯುದ್ಧದಲ್ಲಿ ಭೂಮಿಯಲ್ಲಿ ಉರುಳಿಸಿ ನಿನ್ನ ತಲೆಯನ್ನು ಮತ್ತೆಮತ್ತೆ ತುಳಿಯುವೆನು.

ದುರ್ಯೋಧನ ಮತ್ತೂ ಮುಂದುವರೆದು ದ್ರೌಪದಿಯ ವಸ್ತ್ರಾಪಹರಣದ ನೀಚಕೃತ್ಯದಲ್ಲಿ ತೊಡಗುವನು. ಅವನ ಪ್ರೇರಣೆಗನುಗುಣವಾಗಿ ದುಃಶಾಸನ ದ್ರೌಪದಿಯ ವಸ್ತ್ರಕ್ಕೆ ಕೈ ಹಾಕಿಯೇ ಬಿಡುವನು. ಮತ್ತೆ ಭೀಮಸೇನ ಪ್ರತಿಜ್ಞೆ ಮಾಡುವನು –**'ದುಃಶಾಸನಸ್ಯಾಸ್ಯ ವಿದಾರ್ಯ ವಕ್ಷಃ ಪಿಬಾಮಿ ರಕ್ತಂ ಜಗತಃ ಸಮಕ್ಷಮ್'** ಎಲ್ಲರೂ ನೋಡುತ್ತಿರುವಂತೆಯೇ ಇವನ ಎದೆ ಬಗೆದು ರಕ್ತವನ್ನು ಹೀರುವೆನು.

ರಣರಂಗದಲ್ಲಿಯೇ ದುರ್ಯೋಧನಾದಿಗಳ ಹತ್ಯೆ ನಡೆಯಬೇಕೆಂಬುದು ಭಗವಂತನ ತೀರ್ಮಾನವೆಂಬುದನ್ನು ಅರಿತಿದ್ದ ಭೀಮಸೇನ ಆಗಲೇ ಅವರನ್ನು ಕೊಲ್ಲಲು ಮುಂದುವರಿಯುವುದಿಲ್ಲ. ಒಬ್ಬ ದಡ್ಡ ವಿದ್ಯಾರ್ಥಿಯೇ ಆಗಿದ್ದರೂ ಅವನ ವಾರ್ಷಿಕ ಪರೀಕ್ಷೆ ಮುಗಿದ ಮೇಲೆಯೇ ಅವನ ಫಲಿತಾಂಶವನ್ನು ಹೇಗೆ ಪ್ರಕಟಿಸಲಾಗುವುದೋ ಹಾಗೆ. ಅರ್ಜುನಾದಿಗಳು ಮಾತ್ರ ಅಸಮರ್ಥರಾಗಿಯಷ್ಟೇ ಸುಮ್ಮನಿದ್ದರು. ಆದುದರಿಂದಲೇ ಆ ಸಂದರ್ಭದಲ್ಲಿ ಅವರು ಯಾವ ಪ್ರತಿಜ್ಞೆಯನ್ನೂ ಮಾಡುವುದಿಲ್ಲ.

ಒಂದು ಕಡೆ ಭಗವಂತನ ಸಂಕಲ್ಪ ಮತ್ತೊಂದೆಡೆ ಪತ್ನಿಗೆ ಅವಮಾನಿಸಿದವನನ್ನು ದಂಡಿಸುವುದು. ಈ ಎರಡರಲ್ಲಿ ಬೇರೆ ಯಾರಾದರೂ, ದಂಡಿಸಲು ಅಸಮರ್ಥರಾಗಿದ್ದರೂ ಸಹ ದಂಡನೆಯ ಪಕ್ಷವನ್ನೇ ಆರಿಸುತ್ತಿದ್ದರು. ಆದರೆ ಭೀಮಸೇನ ಮಾತ್ರ ಸರ್ವಸಮರ್ಥನಾಗಿದ್ದರೂ ಆ ಕ್ಷಣದಲ್ಲಿಯೇ ಭಗವಂತನ ಸಂಕಲ್ಪಕ್ಕೆ ಗೌರವ ಕೊಟ್ಟು ದುರ್ಯೋಧನಾದಿಗಳನ್ನು ಆ ಕ್ಷಣದಲ್ಲಿಯೇ ವಧಿಸಲು ತೊಡಗುವುದಿಲ್ಲ. ಈ ಹಿನ್ನೆಲೆಯಲ್ಲಿಯೇ ಶ್ರೀವಾದಿರಾಜಸ್ವಾಮಿಗಳು ತಮ್ಮ ಸರಸಭಾರತೀವಿಲಾಸದಲ್ಲಿ ಹೀಗೆ ಘೋಷಿಸುವರು – **'ಅತಃ ಕೃಷ್ಣಮತಾಭಿಜ್ಞೋ ಭೀಮ ಏವ ನ ಸಂಶಯಃ'** ಈ ಘಟನೆಗಳನ್ನೆಲ್ಲ ಪರಿಶೀಲಿಸಿದರೆ ಭೀಮಸೇನ ಶ್ರೀಕೃಷ್ಣನ ಆಂತರ್ಯವನ್ನು ಚೆನ್ನಾಗಿ ಬಲ್ಲವನೆಂದು ಸ್ಪಷ್ಟವಾಗುವುದು. ಆದರ ಜೊತೆಗೆ ಮತ್ತೊಂದು ಮಾತನ್ನೂ

ಸೇರಿಸಿರುವರು – **'ಭೀಮಸ್ಯ ಹಿತಕಾರೀ ತು ಕೃಷ್ಣ ಏವ ನ ಸಂಶಯಃ'** ಶ್ರೀಕೃಷ್ಣ ಸದಾ ಭೀಮನಿಗೆ ಹಿತಕಾರಿಯೇ ಆಗಿರುವನು.

ರಾಮಾಯಣದಲ್ಲಿ ಗೌತಮರಪತ್ನಿ ಅಹಲ್ಯೆಯನ್ನು ಬಲಾತ್ಕರಿಸಿದ ವಿಚಾರ ಬರುವುದು. ಗೌತಮರು ಅಷ್ಟೆಲ್ಲ ಬಲ್ಲವರಾಗಿದ್ದರೂ, ದೇವೇಂದ್ರ ತಮ್ಮ ಪತ್ನಿಯನ್ನು ಬಲಾತ್ಕರಿಸಿದನೆಂದು ತಿಳಿದಾಗ ಅದನ್ನು ಸಹಿಸಿಕೊಳ್ಳಲಾಗದೆ ಶಪಿಸಿಯೇ ಬಿಡುವರು. ಹೀಗೆ ತಪೋಮೂರ್ತಿಯಾದ ಗೌತಮರು ಯಾವ ಅಂಶದಲ್ಲಿ ಸೋತಿದ್ದರೋ ಆ ಅಂಶದಲ್ಲಿ ಭೀಮಸೇನ ಗೆದ್ದಿದ್ದನು. ಈ ಅಂಶದಲ್ಲೂ **'ಭೀಮಸೇನ ಸಮೋ ನಾಸ್ತಿ ಸೇನಯೋರುಭಯೋರಪಿ'**

ಅರ್ಜುನಾದಿಗಳು ಸಹ ಸುಮ್ಮನಿದ್ದರೂ ಅದು ಅವರ ಅಸಾಮರ್ಥ್ಯದಿಂದಾಗಿಯೇ ಹೊರತು ಭಗವತ್ಸಂಕಲ್ಪದ ಪರಿಜ್ಞಾನದಿಂದಾಗಿ ಅಲ್ಲ.. ಭೀಮಸೇನನಾದರೂ ಪ್ರತಿಭಟನೆಗೆ ಬೇಕಾದ ಸಾಮರ್ಥ್ಯ ಸಂಪನ್ನನಾಗಿದ್ದರೂ, ಭಗವಂತನ ಸಂಕಲ್ಪವನ್ನರಿತು ಸಂಯಮಿಯಾಗಿ ಸುಮ್ಮನಿದ್ದನು. ಭೀಮಸೇನ ಕೃಷ್ಣನನ್ನು ಅರಿತಿದ್ದಂತೆಯೇ ಕೃಷ್ಣೆಯನ್ನೂ ಅರಿತಿದ್ದನು. ಶಿವಾದಿಗಳಿಂದ ವಂದ್ಯಳಾದ ಭಾರತಿಯಾದ ಅವಳಿಗೆ ದುರ್ಯೋಧನಾದಿಗಳು ಏನನ್ನೂ ಮಾಡಲಾರರು ಎಂಬುದು ಸಹ ಅವನಿಗೆ ಗೊತ್ತಿತ್ತು. ಪತಿಯ ಸಂಕಲ್ಪವೇ ತನ್ನ ಸಂಕಲ್ಪ ಎಂದು ಭಾವಿಸಿದ ದ್ರೌಪದಿ ಆ ಕಾಲದಲ್ಲಿ ಎಂದಿನಂತೆ ವಿಶೇಷವಾಗಿ ಹರಿಸ್ಮರಣೆ ಮಾಡುತ್ತಿದ್ದಳೇ ಹೊರತು ಹತಾಶಳಾಗಿ ಅಲ್ಲ. ಈ ಸಂದರ್ಭದಲ್ಲಿ ಪಂಪ, ಕುಮಾರವ್ಯಾಸಾದಿಗಳೆಲ್ಲ ದ್ರೌಪದಿಯನ್ನು ಒಬ್ಬ ಹತಾಶ ಸ್ತ್ರೀಯಂತೆ ತಪ್ಪಾಗಿ ಚಿತ್ರಿಸಿದ್ದಾರೆ.

ದುರ್ಯೋಧನ ದ್ರೌಪದಿಯನ್ನು ತನ್ನ ಮನೆಗೆ ಸೇರಿಸಲು ದುಃಶಾಸನನಿಗೆ ತಿಳಿಸುವನು. ದುಃಶಾಸನ ದ್ರೌಪದಿಯನ್ನು ಎಳೆಯಲು ಪ್ರಾರಂಭಿಸುವನು. ಅವನನ್ನು ಕ್ರೋಧದಿಂದ ದಿಟ್ಟಿಸಿ ನೋಡುವ ಭೀಮಸೇನ ಆಗ ಹೇಳುವ ಮಾತು ಅವನ ತತ್ತ್ವಜ್ಞಾನದ ಪರಿಪಾಕಕ್ಕೆ ಹಿಡಿದ ಕನ್ನಡಿ. ಮಾನವಜೀವನದ ಸಾರ್ಥಕ್ಯದ ಬಗ್ಗೆ ತಾತ್ತ್ವಿಕಬೆಳಕು ಚೆಲ್ಲಬಲ್ಲ ಉತ್ತಮ ಸುಭಾಷಿತ ಅದು:

**ಪತಿತಸ್ಯಾಸ್ಯ ದೇಹಸ್ಯ ಕಾಷ್ಠವಿಷ್ಠಾಸಮಸ್ಯ ಚ ।**
**ಫಲಾನಿ ತ್ರೀಣಿ ಶಿಷ್ಯಂತೇ ವಿದ್ಯಾ ಕರ್ಮ ಸುತಾ ಇತಿ ॥**

ಅಶಾಶ್ವತವಾದ ಈ ದೇಹ ಬಿದ್ದು ಹೋದ ಮೇಲೂ ಇದರ ಫಲವಾಗಿ ಉಳಿದುಕೊಳ್ಳುವವು, ಪುಣ್ಯಪಾಪಾತ್ಮಕ ಕರ್ಮಗಳು ಹಾಗೂ ಮಕ್ಕಳು. ವಿದ್ಯೆ

ಮೋಕ್ಷದವರೆಗೂ ಬರುವಂತಹದು. ಕರ್ಮದ ಪರಿಣಾಮ ಐಹಿಕವಾಗಿಯೂ ಉಳಿಯುವಂತಹದು. 'ಇದನ್ನು ಮಾಡಿದವರು ಅವರು' ಎಂಬುದಾಗಿ ಅವರನ್ನು ನೆನಪಿಸಿಕೊಡುವಂತಹದು. **'ಪ್ರಜಾತಂತುಂ ಮಾ ವ್ಯವಚ್ಛೇತ್ಸೀಃ'** – ಎಂದು ಉಪನಿಷತ್ತು ಸಂದೇಶಿಸಿರುವಂತೆ ಮುಂದೆ ಮುಂದೆ ಹರಿಯುತ್ತಿರಬೇಕಾದ ವಿದ್ಯಾಪರಂಪರೆಗೆ, ಜ್ಞಾನಪರಂಪರೆಗೆ ಪೂರಕವಾಗಿ ಸಂತಾನಪರಂಪರೆ ಮುಂದುವರೆಯುವಂತೆ ಮಾಡಲು ಮಕ್ಕಳು ಅತ್ಯವಶ್ಯ. ಹೀಗೆ ತಾತ್ತ್ವಿಕಚಿಂತನೆಯ ಸಾರಸರ್ವಸ್ವವನ್ನು ಭೀಮಸೇನ ಈ ಮೂಲಕ ತಿಳಿಸಿರುವನು.

ಭೀಮಸೇನ ಆ ಕ್ಷಣದಲ್ಲಿಯೇ ದುರ್ಯೋಧನಾದಿಗಳನ್ನು ಸಂಹಾರ ಮಾಡುವವನಂತೆ ಪರಿಘಾಯುಧವನ್ನು ತೆಗೆದುಕೊಳ್ಳಲು ಸಿಟ್ಟಿನಿಂದ ನೋಡುತ್ತಿರಲು ಹೆಣ್ಣುನರಿಗಳು ಕೂಗುವುದೇ ಮುಂತಾದ ಅಪಶಕುನಗಳಾಗುವವು. ಧೃತರಾಷ್ಟ್ರನು ವಿದುರನಲ್ಲಿ ಏನಾಯಿತು? ಏನಾಯಿತು? ಎಂದು ವಿಚಾರಿಸುವನು. ಅಣ್ಣಾ! **'ಕಿಂ ಜಿತಂ ಕಿಂ ಜಿತಂ..'** 'ನನ್ನ ಮಕ್ಕಳಿಂದ ಜೂಜಾಟದಲ್ಲಿ ಏನು ಗಳಿಸಲ್ಪಟ್ಟಿತು?' ಎಂದು ಕೇಳುತ್ತಿದ್ದ ನೀನು **'ಕೋ ಹತಃ ಕೋ ಹತಃ'** ನನ್ನ ಮಕ್ಕಳಲ್ಲಿ ಯಾರ್ಯಾರು ಭೀಮಸೇನನಿಂದ ಕೊಲ್ಲಲ್ಪಟ್ಟರೆಂದು ವಿಚಾರಿಸಬೇಕಾದ ಸ್ಥಿತಿ ಈಗ ಬಂದಿದೆ. ಹಾಗಾಗದಂತೆ ದ್ರೌಪದಿ, ಭೀಮಸೇನರನ್ನು ಸಮಾಧಾನಪಡಿಸು – ಎಂದು ವಿದುರ ಹೇಳುವನು. ಅದರಂತೆ ಧೃತರಾಷ್ಟ್ರನು ನಡೆದು ಆ ದ್ಯೂತಪ್ರಸಂಗ ಮುಕ್ತಾಯವಾಗುವುದು.

ಅನಂತರ ಕೌರವರ ಕುತಂತ್ರದಿಂದ ಮತ್ತೊಮ್ಮೆ ದ್ಯೂತ ನಡೆದು ಶಕುನಿಯ ವಂಚನೆಗೆ ಬಲಿಯಾಗಿ ಯುಧಿಷ್ಠಿರ ಮರಳಿ ಸೋಲುವನು. ಅದರ ಕರಾರಿನಂತೆ ಪಾಂಡವರು ಹನ್ನೆರೆಡು ವರ್ಷಗಳ ವನವಾಸ ಅನಂತರದ ಒಂದುವರ್ಷ ಅಜ್ಞಾತವಾಸಕ್ಕೆಂದು ಹೊರಟು ನಿಲ್ಲುವರು.

## ಭೀಮನ ಇನ್ನೆರಡು ಪ್ರತಿಜ್ಞೆಗಳು

ದುಃಶಾಸನ ಆಗ ಭೀಮನ ನಡಿಗೆಯನ್ನು ಅಣಕಿಸುತ್ತ ಅಪಹಾಸ ಮಾಡುವನು. ಅದನ್ನು ಕಂಡು ಉಳಿದೆಲ್ಲ ಕೌರವರು ನಗುವರು. ಆಗಲೇ ಭೀಮಸೇನ **'ಹಂತಾಽಸ್ಮಿ ವೋ ನಿಖಿಲಾನ್ ಸಂಗರೇಽಹಮ್'** – ಯುದ್ಧದಲ್ಲಿ ನಿಮ್ಮೆಲ್ಲರನ್ನೂ ನಾನು ಕೊಲ್ಲುವೆನೆಂದು ಪ್ರತಿಜ್ಞೆಯನ್ನು ಕೈಗೊಳ್ಳುವನು. **'ವಿಹಸಂತ್ಯಚ್ಯುತಪ್ರಿಯಾನ್'** ಎಂಬುದಾಗಿ ಭಾಗವತದ ಜಾಯಂತೇಯೋಪಾಖ್ಯಾನದಲ್ಲಿ ಭಗವದ್ಭಕ್ತರ ಬಗ್ಗೆ ಅಪಹಾಸ್ಯ ಮಾಡುವುದು ತಮೋಯೊಗ್ಯರ ಲಕ್ಷಣವೆಂಬುದಾಗಿ

ಹೇಳಲಾಗಿದೆ. ಹಾಗೆ ಅಪಹಾಸಕ್ಕೆ ತೊಡಗಿದ ಕೌರವರೆಲ್ಲರೂ ಅಂತಹ ತಮೋಯೋಗ್ಯರೆಂದು ತೀರ್ಮಾನಿಸಿ ಅವರ ಹತ್ಯೆಗೆ ಭೀಮಸೇನ ಪ್ರತಿಜ್ಞೆ ಮಾಡುವನು. ಭೀಮಸೇನ ಉಳಿದ ಕೌರವರನ್ನು ಯಾಕೆ ಕೊಲ್ಲಬೇಕಿತ್ತೆಂಬ ಆಕ್ಷೇಪಕ್ಕೆ ಇದು ಉತ್ತರವಾಗಿದೆ.

ಭೀಮಸೇನನ ಪ್ರತಿಜ್ಞೆಯನ್ನು ಕೇಳಿ ಕಂಗಾಲಾದ ಧಾರ್ತರಾಷ್ಟ್ರರು ತಮಗೆ ಭೀಮಸೇನನಿಂದ ರಕ್ಷಣೆ ನೀಡಲು ದ್ರೋಣಾಚಾರ್ಯರಲ್ಲಿ ಬೇಡಿಕೊಳ್ಳುವರು. ಆಗ ದ್ರೋಣರು ತಿಳಿಸುವರು – 'ಭೀಮಸೇನನಂತಹ ಮಹಾವೀರನಿಂದ ನಿಮ್ಮನ್ನು ರಕ್ಷಣೆ ಮಾಡಲು ನಾನು ಅಸಮರ್ಥ. ಆದರೆ ನಿಮಗಾಗಿ ನಾನು ಆಯುಧ ಹಿಡಿದು ಕಾದಾಡುವೆನು'.

ಪಾಂಡವರು ಸಭೆಯಿಂದ ವನದ ಕಡೆಗೆ ಹೊರಡುವರು. ಭೀಮಸೇನ **'ಯುವಸಿಂಹಖೇಲಗತಿಂ'** – ಯುವಸಿಂಹದಂತೆ ಗಂಭೀರವಾಗಿ ಹೆಜ್ಜೆಗಳನ್ನಿಡುತ್ತಿದ್ದನು. ದುರ್ಯೋಧನ ಅವನ ನಡಿಗೆಯನ್ನು ಅಣಕಿಸಿ ನಗುವನು. ಸಭೆಯಿಂದ ಹೊರಕ್ಕೆ ನಡೆಯುತ್ತಿದ್ದ ಭೀಮಸೇನ ಅರ್ಧ ತಿರುಗಿ **'ಊರುಂ ತವಾನ್ಯಂ ಚ ರಣೇ ವಿಭೇತ್ಸೇ'**; ಯುದ್ಧದಲ್ಲಿ ನಿನ್ನ ಮತ್ತೊಂದು ತೊಡೆಯನ್ನೂ ಸಹ ಮುರಿಯುವೆನೆಂದು ಕೂಡಲೇ ಪ್ರತಿಜ್ಞೆ ಮಾಡುವನು.

ಹೀಗೆ ಭೀಮಸೇನ ಕೌರವ ಸಭೆಯಿಂದ ಹೊರ ಹೊರಟ ಕ್ಷಣದಿಂದಲೇ ಆ ಸಭೆ ಸತ್ತಂತೆಯೇ. ಪ್ರಾಣದೇವ ದೇಹದಿಂದ ಹೊರನಡೆದರೆ ಹೇಗೋ ಹಾಗೆ.

ಭೀಮಸೇನ ಅರಣ್ಯಕ್ಕೆ ತೆರಳುವಾಗ ತನ್ನ ಎರಡು ತೋಳುಗಳನ್ನು ಮೇಲೆ ಎತ್ತಿಕೊಂಡು ಸಾಗುವನು. ವಿದುರ ಧೃತರಾಷ್ಟ್ರನಿಗೆ ಅದರ ಸಂಕೇತವನ್ನು ತಿಳಿಸುವನು – ದುಷ್ಟ ಕೌರವರನ್ನೆಲ್ಲ ಬಂಧು ಬಾಂಧವರ ಸಮೇತ ಸಂಹರಿಸಲು ನನಗೆ ಈ ತೋಳುಗಳೇ ಸಾಕು; ಭೀಮಸೇನ ಮುಂದೆ ಹಾಗೆಯೇ ಮಾಡುವನು ಕೂಡ.

## ಯುಧಿಷ್ಠಿರ ಆದ ಹಿನ್ನೆಲೆ

ಪಾಂಡವರ ವನವಾಸದ ಸಂದರ್ಭದಲ್ಲಿಯೂ ಭೀಮಸೇನನ ಪಾತ್ರ ತುಂಬಾ ಮಹತ್ತ್ವದ್ದು. ತುಂಬ ಶಾಂತನಾಗಿದ್ದ ಧರ್ಮರಾಜ ಮಹಾಭಾರತಯುದ್ಧದ ಸಂದರ್ಭದಲ್ಲಿ 'ಯುಧಿಷ್ಠಿರ' – ಯುದ್ಧದ ಬಗ್ಗೆ 'ಸ್ಥಿರ'ನಾದದ್ದು ವನವಾಸದ ಸಂದರ್ಭದಲ್ಲಿ; ಭೀಮದ್ರೌಪದಿಯರು ನೀಡಿದ ಉಪದೇಶದಿಂದಾಗಿ. ಅರ್ಜುನ ಯುಧಿಷ್ಠಿರನಿಗಿಂತ ಎಷ್ಟೋ ಹೆಚ್ಚು ಶೂರ; ಪರಾಕ್ರಮಿ. ಅಂತಹವನ ಬಾಯಿಯಿಂದ

**'ನ ಯೋತ್ಸ್ಯೇ'** ಯುದ್ಧ ಮಾಡುವುದಿಲ್ಲ ಎಂಬ ಮಾತು ಬರುವ ಬದಲು ಯುಧಿಷ್ಠಿರನಿಂದ ಬಂದಿದ್ದರೆ ಹೆಚ್ಚು ಉಚಿತವೆನಿಸುತ್ತಿತ್ತು; ಭಗವದ್ಗೀತೆ ಶ್ರೀಕೃಷ್ಣಾರ್ಜುನಸಂವಾದದ ರೂಪದಲ್ಲಿ ಹೊರಹೊಮ್ಮುವ ಬದಲು 'ಶ್ರೀಕೃಷ್ಣಯುಧಿಷ್ಠಿರಸಂವಾದ'ದ ರೂಪದಲ್ಲಿ ರೂಪುಗಂಡರೆ ಇನ್ನಷ್ಟು ಅರ್ಥಗರ್ಭಿತವೆನ್ನಿಸುತ್ತಿತ್ತು ಎಂದು ಯಾರಿಗಾದರೂ ಎನ್ನಿಸಬಹುದು. ಆದರೆ ಧರ್ಮರಾಜನನ್ನು ಈಗಾಗಲೇ ಭೀಮಸೇನ–ದ್ರೌಪದಿಯರು 'ಯುಧಿಷ್ಠಿರ'ನನ್ನಾಗಿ ಮಾರ್ಪಡಿಸಿದ್ದರಿಂದ ಅವನು ಯುದ್ಧದ ಬಗ್ಗೆ ಹಿಂಜರಿಯಲೇ ಇಲ್ಲ. ಆದ್ದರಿಂದ ಅವನಿಗೆ ಉಪದೇಶ ನೀಡುವ ಅವಶ್ಯಕತೆ ಶ್ರೀಕೃಷ್ಣನಿಗೆ ಕಾಣಿಸಲೇ ಇಲ್ಲ; ಅದು ಆದದ್ದು ಹೀಗೆ.

ಪಾಂಡವರ ವನವಾಸ ಒಂದು ವರ್ಷ ಕಳೆದಿದೆ; ಮಹಾರಾಜನಾಗಿ ತಾನು ಆಡಿದ ದ್ಯೂತ, ದುರ್ಯೋಧನಾದಿಗಳ ಕಪಟ ಮೊದಲಾದವುಗಳ ಬಗ್ಗೆ ಸ್ವಲ್ಪವೂ ಚಿಂತಿಸದ ಯುಧಿಷ್ಠಿರನು ಋಷಿಮುನಿಗಳ ಆರಾಧನೆ, ದಾನ, ಧರ್ಮ ಇತ್ಯಾದಿಗಳಲ್ಲಿಯೇ ಮುಳುಗಿದ್ದನು; ಭೀಮದ್ರೌಪದಿಯರು ಅವನನ್ನು ಮುಂದೆ ಯುದ್ಧಕ್ಕೆ ಸಿದ್ಧಪಡಿಸಬೇಕೆಂದು ಸಮಾಲೋಚಿಸುವರು; ಆ ನಿಟ್ಟಿನಲ್ಲಿ ಪ್ರಸ್ತಾವನೆ ಮಾಡಲು ಭೀಮಸೇನ ದ್ರೌಪದಿಗೆ ತಿಳಿಸುವನು. ದ್ರೌಪದಿ ಬಂದು ಧರ್ಮರಾಜನಲ್ಲಿ ಅನೇಕ ಮಾತುಗಳನ್ನು ಹೇಳುವಳು; ಅವುಗಳಲ್ಲಿ ಒಂದು ಮಾತು ಮುಖ್ಯ: ತಾವು ವನವಾಸಕ್ಕೆ ತೆರಳುವ ಸಂದರ್ಭದಲ್ಲಿ ದುರ್ಯೋಧನ ಮೊದಲಾದವರು ಮರುಗದಿದ್ದದ್ದು; ತನ್ನ ಅಪರಾಧದಿಂದಾಗಿ ತನ್ನ ತಮ್ಮಂದಿರೆಲ್ಲ ಕಾಡುಪಾಲಾಗುವಂತಾಯಿತಲ್ಲ– ಎಂದು ನೀನು ಸ್ವಲ್ಪವೂ ಪಶ್ಚಾತ್ತಾಪಪಡದಿರುವುದು; ನನಗೆ ವಿಸ್ಮಯ ಉಂಟು ಮಾಡಿರುವುದು ಎನ್ನುವಳು.

ಅದಕ್ಕೆ ಉತ್ತರವಾಗಿ 'ಕ್ಷಮೆ'ಯ ಮಹತ್ತ್ವವನ್ನು ತಿಳಿಸುವ ಧರ್ಮರಾಜನು ದುರ್ಯೋಧನಾದಿಗಳು ತಪ್ಪು ಮಾಡಿದ್ದರೂ ಅದಕ್ಕೆ ದೇವರು ಶಿಕ್ಷೆಕೊಡುವನು– ಎಂದೆಲ್ಲ ವಾದಿಸುವನು. ಅದಕ್ಕೆ ದ್ರೌಪದಿ ಉತ್ತರಿಸುವಳು – ಕ್ಷಮೆ ಬ್ರಾಹ್ಮಣರ ಋಷಿಮುನಿಗಳ ಧರ್ಮ, ಕ್ಷತ್ರಿಯರು ದುಷ್ಟರಿಗೆ ದಂಡನೆ ನೀಡಲೇಬೇಕು. ಒಂದೊಮ್ಮೆ ದುಷ್ಟರಿಗೆ ದೇವರೇ ಶಿಕ್ಷೆ ಕೊಡುವನೆಂದು ಸುಮ್ಮನಿರುವುದಾದರೆ **'ರಾಜ್ಞಾಂ ನ ಕೃತ್ಯಂ ನ ಚ ಲೋಕಯಾತ್ರಾ,'** – ಕ್ಷತ್ರಿಯರಾದ ರಾಜರಿಗೆ ಕರ್ತವ್ಯವೇ ಇಲ್ಲವಾದೀತು; ಲೋಕದಲ್ಲಿ ದುಷ್ಟರೇ ತುಂಬಿ ಲೋಕವ್ಯವಹಾರವೇ ಸ್ಥಗಿತವಾಗಿಬಿಡುವ ಅಪಾಯ ಇದೆ. ಆದ್ದರಿಂದ ರಾಜನಾದವನು ಅವಶ್ಯವಾಗಿ

ದುಷ್ಟನಿಗ್ರಹ ನಡೆಸಬೇಕು. ಎಲ್ಲಾದರೂ ಕಳ್ಳತನ ಆದಾಗ ಅದರ ಬಗ್ಗೆ ಸಾಮಾನ್ಯನೊಬ್ಬನು ಸ್ಪಂದಿಸದೆ ಇರಬಹುದು; ಆದರೆ ಪೋಲೀಸ್ ಅಧಿಕಾರಿಯೂ ಸುಮ್ಮನಿದ್ದುಬಿಟ್ಟರೆ ಹೇಗೆ? ದ್ರೌಪದಿಯ ವಾದಕ್ಕೆ ಯುಧಿಷ್ಠಿರನಿಗೆ ಉತ್ತರಿಸಲು ಬರುವುದಿಲ್ಲ. ಅವನು ವಾದದ ಸರಣಿಯನ್ನು ತಿರುಗಿಸಿ, ದ್ರೌಪದಿಯ ವಾದ ದೇವರ ಸ್ವಾತಂತ್ರ್ಯವನ್ನು ಅಲ್ಲಗಳೆಯುವಂತಹದ್ದೆಂದು ಟೀಕಿಸಲು ಪ್ರಾರಂಭಿಸುವನು. ಮಧ್ವಸಿದ್ಧಾಂತದ ಪರಮಾತ್ಮನ ಸ್ವತಂತ್ರಕರ್ತೃತ್ವದ ತತ್ತ್ವಗಳನ್ನು ದುರುಪಯೋಗಪಡಿಸಿಕೊಳ್ಳುವ ಒಂದುವರ್ಗಕ್ಕೆ ಯುಧಿಷ್ಠಿರನ ಈ ಪ್ರಸಂಗ ಉತ್ತಮ ನಿದರ್ಶನ.

ಕೂಡಲೇ ಮಧ್ಯ ಪ್ರವೇಶಿಸುವ ಭೀಮಸೇನ ದ್ರೌಪದಿಯ ವಾದವನ್ನು ಸಮರ್ಥಿಸುವನು; ಭೀಮಸೇನ ಆಗ ನೀಡುವ ಸಮರ್ಥನೆ **'ಕರ್ತಾ ಶಾಸ್ತ್ರಾರ್ಥವತ್ತ್ವಾತ್'** ಎಂಬ ಬ್ರಹ್ಮಸೂತ್ರದ ವಿಸ್ತೃತಭಾಷ್ಯರೂಪದಲ್ಲಿ ಇರುವಂತಹದು. ಸೂತ್ರಭಾಷ್ಯದಲ್ಲಿ ತೋರಿಸದ ಕೆಲವು ಅಂಶಗಳನ್ನೂ ಶ್ರೀಮದಾಚಾರ್ಯರು ಇಲ್ಲಿ ನಿರೂಪಿಸಿರುವರು. **'ನಿಯತಂ ಕುರು ಕರ್ಮ ತ್ವಂ ಕರ್ಮ ಜ್ಯಾಯೋ ಹ್ಯಕರ್ಮಣಃ' 'ಕರ್ಮಣ್ಯೇವಾಧಿಕಾರಸ್ತೇ...'** ಮುಂತಾದ ಮಾತುಗಳೆಲ್ಲ ಪ್ರತಿಯೊಬ್ಬ ವ್ಯಕ್ತಿಯ ಕರ್ತವ್ಯ ನಿರ್ವಹಣೆಗೆ ಒತ್ತು ನೀಡುತ್ತಿವೆ. ದುರ್ಯೋಧನಾದಿಗಳು ಪಾಪಿಗಳೆಂದ ಮೇಲೆ ಅವರ ನಿಗ್ರಹ ರಾಜರ, ಅದರಲ್ಲೂ ರಾಜಸೂಯಯಾಗ ಮಾಡಿದ ಚಕ್ರವರ್ತಿಯ ಪರಮಧರ್ಮ. ಚಕ್ರವರ್ತಿಯಾದವನು ಅಶ್ವಮೇಧಾದಿ ಯಾಗಗಳನ್ನು ನಡೆಸಿದರೂ, ದುರ್ಜನರನ್ನು ದಂಡಿಸದಿದ್ದಲ್ಲಿ ಕರ್ತವ್ಯಭ್ರಷ್ಟನಾಗುವನು. ಅದು ಒಬ್ಬ ಕೊಲೆಗಡುಕನ ಬಗ್ಗೆ ನ್ಯಾಯಾಧೀಶ ಕನಿಕರ ತೋರಿಸಿದಂತಾಗಬಲ್ಲದು.

ಹೀಗೆ ಆ ಸಂದರ್ಭದಲ್ಲಿ ಭೀಮಸೇನ 'ಪೌರುಷವಾದ'ದ ಬಗ್ಗೆ ನೀಡಿದ ವಿವರ ಮಹಾಭಾರತದ ನೂರಾರು ಶ್ಲೋಕಗಳಲ್ಲಿ ನಿರೂಪಿಸಲ್ಪಟ್ಟಿದೆ. ಅದರ ಬಗ್ಗೆ ಯಾರೂ ಹೆಚ್ಚು ಗಮನ ಹರಿಸಿಲ್ಲ. ಸಂಸ್ಕೃತದ ಕವಿ ಭಾರವಿ ತನ್ನ ಕಿರಾತಾರ್ಜುನೀಯದಲ್ಲಿ:

**ಸ್ಫುಟತಾ ನ ಪದೈರಪಾಕೃತಾ ನ ಚ ನ ಸ್ವೀಕೃತಮರ್ಥಗೌರವಮ್ ।**
**ರಚಿತಾ ಪೃಥಗರ್ಥತಾ ಗಿರಾಂ ನ ಚ ಸಾಮರ್ಥ್ಯಮಪೋಹಿತಂ ಕ್ವಚಿತ್ ॥**

**ಉಪಪತ್ತಿರುದಾಹೃತಾ ಬಲಾದನುಮಾನೇನ ನ ಚಾಗಮಃ ಕ್ಷತಃ ।**
**ಇದಮೀದೃಗನೀದೃಗಾಶಯಃ ಪ್ರಸಭಂ ವಕ್ತುಮುಪಕ್ರಮೇತ ಕಃ ॥**

ಎಂಬುದಾಗಿ ಆ ಮಾತುಗಳ ವೈಶಿಷ್ಟ್ಯವನ್ನು ಯುಧಿಷ್ಠಿರನ ಬಾಯಿಂದ ಹೊಗಳಿರುವನು. ಆದರೆ ಭಾರತದಲ್ಲಿ ಬಂದಿರುವ ಭೀಮದ್ರೌಪದಿಯರ ಉಪದೇಶ ಸರಣಿಯನ್ನು ಸಮಗ್ರವಾಗಿ ಸಂಗ್ರಹಿಕೊಟ್ಟಿರುವ ಹಿರಿಮೆ ಶ್ರೀಮಧ್ವಾಚಾರ್ಯರದು ಮಾತ್ರ. ಭೀಮಸೇನನ ವಾದದಿಂದ ಪ್ರಭಾವಿತನಾದ ಯುಧಿಷ್ಠಿರ ಮುಂದೆ ಹದಿಮೂರು ವರ್ಷಗಳ ಬಳಿಕವೂ ರಾಜ್ಯವನ್ನು ನೀಡದಿದ್ದಲ್ಲಿ ದುರ್ಯೋಧನಾದಿಗಳ ವಿರುದ್ಧ ಕಾದಾಡುವುದಕ್ಕೆ ಒಪ್ಪಿಕೊಳ್ಳುವನು. ಭಗವದ್ಗೀತೆಯ ಉಪದೇಶದ ಬಳಿಕ ಅರ್ಜುನ ಹೇಗೆ **'ಕರಿಷ್ಯೇ ವಚನಂ ತವ'** ಎನ್ನುವನೋ, ಅಂತೆಯೇ ಭೀಮನ ಈ ವಾದವನ್ನು ಕೇಳಿದ ಬಳಿಕ ಯುಧಿಷ್ಠಿರನೂ **'ಕರಿಷ್ಯೇ ವಚನಂ ತವ'** ಎನ್ನುವನು. **'ಕೃಷ್ಣಗೀತೆ'** ಅರ್ಜುನನನ್ನು ಯುದ್ಧಕ್ಕೆ ಸಿದ್ಧಪಡಿಸಿದ್ದರೆ, **'ಭೀಮಗೀತೆ'** ಯುಧಿಷ್ಠಿರನನ್ನು ಯುದ್ಧಕ್ಕೆ ಅಣಿಗೊಳಿಸಿತ್ತು. ಅಂತೂ ಶ್ರೀಹರಿವಾಯುಗಳ ಪ್ರೇರಣೆಯಿಂದ ಮಹಾಭಾರತಯುದ್ಧ ನಡೆಯಿತೆಂಬುದು ಇದರಿಂದ ಸ್ಪಷ್ಟ.

**'ಭೀಮಸೇನಸಮೋ ನಾಸ್ತಿ ಸೇನಯೋರುಭಯೋರಪಿ । ಪಾಂಡಿತ್ಯೇ ಚ...'** ಎಂಬುದಾಗಿ ಪಾಂಡಿತ್ಯದಲ್ಲೂ ಭೀಮಸೇನನಿಗೆ ಸದೃಶರಾದವರು ಇಲ್ಲ ಎಂದು ಘೋಷಿಸಲಾಗಿದೆ. ಅಂತಹ ಭೀಮಸೇನನ ಪಾಂಡಿತ್ಯಕ್ಕೆ ಮಹಾಭಾರತದ ಈ ಭಾಗ ಹಿಡಿದ ಕನ್ನಡಿಯಾಗಿದೆ.

ಹೀಗೆ ಯುಧಿಷ್ಠಿರನ ಪಾಲಿಗೆ 'ವನವಾಸ' ವಿದ್ಯಾಭ್ಯಾಸಕ್ಕೆ ವೇದಿಕೆ ಆಯಿತು. ಕರ್ತವ್ಯವಿಮುಖನಾಗಿದ್ದ ಅವನನ್ನು ಕರ್ತವ್ಯಮುಖ 'ಯುಧಿಷ್ಠಿರ'ನನ್ನಾಗಿ ರೂಪಿಸಿತು.

ಮಹಾಭಾರತದ ವನಪರ್ವವು ಭೀಮನ ಪರಾಕ್ರಮವನ್ನು ಸಾರುವ ಕಿರ್ಮೀರ ಸಂಹಾರವೇ ಮುಂತಾದ ಅನೇಕ ಘಟನೆಗಳಿಂದಾಗಿ 'ಭೀಮವಿಜಯ' ಎಂದು ಕರೆಸಿಕೊಳ್ಳಲು ಯೋಗ್ಯವಾಗಿದೆ.

## ಸೌಗಂಧಿಕಾಪುಷ್ಪ ಪ್ರಕರಣ

ದ್ರೌಪದಿಯ ಅಪೇಕ್ಷೆಯಂತೆ ಸೌಗಂಧಿಕಾ ಪುಷ್ಪ ತರುವುದಕ್ಕೆ ಭೀಮಸೇನ ಹೊರಡುವನು. ದಟ್ಟ ಅಡವಿಯಲ್ಲಿ ನೇರವಾಗಿ ಸಾಗುವನು. ಗಂಭೀರವಾಗಿ ಸಾಗುವಾಗ ಅವನ ಕಾಲಡಿಗೆ ಸಿಲುಕಿ ಎಷ್ಟೋ ಆನೆಗಳು ಸಿಂಹಗಳು ಸತ್ತು ಬೀಳುವುವು; ಹೀಗೆ ಲೀಲಾಜಾಲವಾಗಿ ಬೆಟ್ಟದ ಮೇಲೇರಿದ ಭೀಮಸೇನನಿಗೆ ಎಷ್ಟೂ ಆಯಾಸವೇ ಆಗಲಿಲ್ಲ.

**ನ ಗ್ಲಾನಿರ್ನ ಚ ವೈಕ್ಲವ್ಯಂ ನ ಭಯಂ ನ ಚ ಸಂಭ್ರಮಃ ।**
**ಕದಾಚಿಜ್ಜುಷತೇ ಪಾರ್ಥಮಾತ್ಮಜಂ ಮಾತರಿಶ್ವನಃ ॥**

ಹೇಗೆ ಸಮುದ್ರ ದಾಟಿದ ಹನುಮಂತನಿಗೆ **'ನೈವಾತ್ರ ವಿಶ್ರಮಣಮೈಚ್ಛದವಿಶ್ರಮೋಽಸೌ'** ಎಂದಿರುವಂತೆ ದಣಿವೇ ಆಗಿದ್ದಿರಲಿಲ್ಲವೋ ಅಂತೆಯೇ ಬೆಟ್ಟ ಹತ್ತಿದ ಭೀಮಸೇನ ಸರೋವರದ ಸೌಗಂಧಿಕ ಪುಷ್ಪಗಳನ್ನು ಕಿತ್ತುಕೊಳ್ಳಲು ತೊಡಗಿದಾಗ, ಅದರ ರಕ್ಷಣೆಯಲ್ಲಿ ತೊಡಗಿದ್ದ ರಾಕ್ಷಸರಿಗೆ ಇವನ ಪರಾಕ್ರಮದ ಅರಿವಾಗಿತ್ತು. ಆದುದರಿಂದಲೇ ಅವರು ಇವನ ಜೊತೆಗೆ ಹೊಂದಾಣಿಕೆ ಮಾಡಿಕೊಳ್ಳಲು ತೊಡಗುವರು. 'ಕೇಳಿದರೆ ಹೂಗಳನ್ನು ಕೊಡುವೆವು' ಎಂಬುದಾಗಿ. ಆಗ ಭೀಮಸೇನ ಉತ್ತರಿಸುವನು : **'ನ ಹಿ ಯಾಚಂತಿ ರಾಜಾನ ಏಷ ಧರ್ಮಃ ಸನಾತನಃ'** ಕ್ಷತ್ರಿಯರು ಯುದ್ಧಮಾಡಿ ತಮಗೆ ಬೇಕಾದದ್ದನ್ನು ಪಡೆದುಕೊಳ್ಳಬೇಕೇ ಹೊರತು ಬ್ರಾಹ್ಮಣರಂತೆ ಬೇಡಿ ಪಡೆದುಕೊಳ್ಳುವುದಲ್ಲ; ಅದು ಕ್ಷತ್ರಿಯರಿಗೆ ಹೇಳಿಸಿದ ಧರ್ಮವಲ್ಲ. ಭೀಮಸೇನ ನಾಲ್ಕೈದು ಪುಷ್ಪಗಳನ್ನು ಪಡೆದುಕೊಳ್ಳುವಲ್ಲೂ ಕ್ಷತ್ರಿಯ ಧರ್ಮಕ್ಕೆ ವ್ಯತಿರಿಕ್ತವಾಗಿ ನಡೆದುಕೊಳ್ಳಲು ಹಿಂಜರಿಯುವನು. ಆದರೆ ಕರ್ಣ ದುರ್ಯೋಧನ ಕೊಟ್ಟ ಅಂಗರಾಜ್ಯವನ್ನು ಏನೂ ಸಂಕೋಚವಿಲ್ಲದೆ ಸ್ವೀಕರಿಸಿಬಿಟ್ಟಿದ್ದ. ಕರ್ಣ ನಿಜವಾಗಿ ಕ್ಷತ್ರಿಯನಾಗಿದ್ದರೆ, ದುರ್ಯೋಧನ ಹಾಗೆ ಕೊಡಲು ಬಂದಾಗ 'ಬೇಕಾಗಿಲ್ಲ'– ಎನ್ನಬೇಕಿತ್ತು. ಆದರ ಬದಲಾಗಿ ದಾನ ಸ್ವೀಕಾರ ಮಾಡಿಬಿಟ್ಟ ಎಂದಮೇಲೆ ಅವನಲ್ಲಿ ಭೀಮಸೇನ ತಿಳಿಸಿದಂತೆ ಕ್ಷತ್ರಿಯತ್ವ ಉಳಿದಿರಲಿಲ್ಲ ಎಂಬುದು ಸ್ಪಷ್ಟ. ಮತ್ತೊಮ್ಮೆ ದ್ರೌಪದಿ ಅಪೇಕ್ಷಿಸಿದಾಗ ಪಂಚವರ್ಣ ಪುಷ್ಪಗಳನ್ನು ಭೀಮ ತಂದಿತ್ತ. ಎರಡೂ ಪ್ರಸಂಗಗಳಲ್ಲೂ ಒಟ್ಟಾಗಿ ಭೀಮ ಒಂಟಿಯಾಗಿ ಸಂಹರಿಸಿದ ರಾಕ್ಷಸರ ಸಂಖ್ಯೆ ಹಲವು ಕೋಟಿಗಳಷ್ಟು; ಹಾಗೆ ಹತರಾದವರಲ್ಲಿ ಮಣಿಮಂತ ಪ್ರಮುಖ.

ರಾಮಾಯಣದಲ್ಲಿ ಹನುಮಂತ ಗಂಧಮಾದನ ಪರ್ವತವನ್ನು ತಂದದ್ದು ಎರಡು ಬಾರಿ, ಎಲ್ಲ ಕಪಿಗಳನ್ನು ಬದುಕಿಸುವುದಕ್ಕಾಗಿ ಒಮ್ಮೆಯಾದರೆ, ಮುಖ್ಯವಾಗಿ ಲಕ್ಷ್ಮಣನನ್ನು ಬದುಕಿಸುವುದಕ್ಕಾಗಿ ಮತ್ತೊಮ್ಮೆ. ಆದರಂತೆಯೇ ಮಹಾಭಾರತದಲ್ಲಿ ಭೀಮಸೇನನೂ ವಿಶಿಷ್ಟಗಂಧದ ಹೂಗಳನ್ನು ಎರಡು ಬಾರಿ ತಂದಿದ್ದನು. ಒಮ್ಮೆ ಸೌಗಂಧಿಕಾ ಪುಷ್ಪಗಳನ್ನು, ಮತ್ತೊಮ್ಮೆ ಪಂಚವರ್ಣದ ಪುಷ್ಪಗಳನ್ನು. ಶ್ರೀಮಧ್ವಾಚಾರ್ಯರೂ ಉತ್ತರಬದರಿಗೆ ಹೋಗಿ ಬಂದದ್ದು ಎರಡು ಬಾರಿ.

ಪತ್ನಿ ತನ್ನ ಪತಿಯಲ್ಲಿಯೇ ತನಗೆ ಬೇಕಾದ ವಸ್ತುಗಳನ್ನು , ಅದರಲ್ಲಿಯೂ ಪುಷ್ಪ ಮೊದಲಾದ ಅಲಂಕಾರದ ವಸ್ತುಗಳನ್ನು ತರಲು ಹೇಳುವಳು; ದ್ರೌಪದಿ

ಸೌಗಂಧಿಕ ಪುಷ್ಪಗಳನ್ನು ಭೀಮಸೇನನಲ್ಲಿಯೇ ತರಲು ಕೇಳಿಕೊಂಡಿದ್ದರಿಂದ ಅವಳು ಮುಖ್ಯವಾಗಿ ಭೀಮಸೇನನ ಪತ್ನಿ. ಯುಧಿಷ್ಠಿರಾದಿಗಳು ಅವಳ ದೇಹದಲ್ಲಿ ಸೇರಿಕೊಂಡಿದ್ದ ಶ್ಯಾಮಲಾದಿಗಳ ಪತಿಯರಷ್ಟೇ ಎಂಬುದು ಸಹ ಈ ಪ್ರಸಂಗದಿಂದ ಸಿದ್ಧವಾಗುವುದು.

## ಅಜಗರನ ಪ್ರಸಂಗ

ಭೀಮಸೇನ ಬಲಿಷ್ಠನಾಗಿದ್ದರೆ ವನವಾಸದ ಸಂದರ್ಭದಲ್ಲೊಮ್ಮೆ ಸರ್ಪದ ಆಕ್ರಮಣಕ್ಕೆ ಒಳಗಾದ ಅವನು ಯಾಕೆ ಬಿಡಿಸಿಕೊಂಡಿಲ್ಲ? ಎಂಬುದು ಕೆಲವರ ಪಶ್ನೆ. ಈ ಪ್ರಸಂಗದ ಹಿನ್ನೆಲೆಯನ್ನು ಪರಿಶೀಲಿಸಿದರೆ ಭೀಮಸೇನ ಅದರಿಂದ ಬಿಡಿಸಿಕೊಳ್ಳದಿದ್ದದ್ದು ತನ್ನ ಅಸಾಮರ್ಥ್ಯದಿಂದಾಗಿ ಅಲ್ಲ ಎಂದು ತಿಳಿಯುವುದು.

ತನ್ನ ದೃಷ್ಟಿಯಿಂದಲೇ ಎಲ್ಲರ ಬಲವನ್ನೂ, ತಪಸ್ಸನ್ನೂ ಹೀರುವ ಸಾಮರ್ಥ್ಯವನ್ನು ವರಬಲದಿಂದಾಗಿ ಹೊಂದಿದ್ದ ನಹುಷ ಅದರ ಪ್ರಭಾವದಿಂದಾಗಿ ಇಂದ್ರನ ಪದವಿಯನ್ನೂ ಪಡೆಯುವಂತಾಯಿತು. ಆದರೆ ಅದರಿಂದಾಗಿ ಗರ್ವಿಷ್ಠನಾದ ಅವನು ದರ್ಪದಿಂದ ಶಚಿಯನ್ನು ಬಯಸುವಷ್ಟು ಕೆಳಮಟ್ಟಕ್ಕೆ ಇಳಿದು, ಋಷಿಗಳಿಂದ ಶಾಪಗ್ರಸ್ತನಾಗಿ ಅಜಗರವಾಗುವನು. 'ನಿನಗಿಂತಲೂ ಬಲಿಷ್ಠನಾದವನನ್ನು ನೀನು ಆಕ್ರಮಿಸಿದಾಗಲೂ ಅವನು ಬಿಡಿಸಿಕೊಳ್ಳದಿದ್ದರೆ, ನಿನ್ನ ಪುಣ್ಯ ಬಲಗಳೆಲ್ಲ ಅವನಿಗೆ ಹೋಗಲಿ; ನಿನ್ನ ಪ್ರಶ್ನೆಗೆ ಉತ್ತರಿಸುವವನಿಂದ ಮತ್ತೆ ನಿನಗೆ ಈ ಶಾಪದಿಂದ ಬಿಡುಗಡೆಯಾಗಲಿ ಎಂದು ಅಗಸ್ತ್ಯರ ಜಟೆಯೊಳಗೆ ಅಡಗಿದ್ದ ಭೃಗುಮುನಿಯಲ್ಲಿ ಆವೇಶಮಾಡಿದ್ದ ಚತುರ್ಮುಖನು ಸರ್ಪರೂಪದಲ್ಲಿದ್ದ ನಹುಷನಿಗೆ ತಿಳಿಸಿದ್ದನು. ಇದನ್ನೆಲ್ಲ ತಿಳಿದಿದ್ದ ಭೀಮಸೇನ ಆ ಸರ್ಪದ ಹಿಡಿತದಿಂದ ಬಿಡಿಸಿಕೊಳ್ಳಲು ಯತ್ನವನ್ನೇ ಮಾಡುವುದಿಲ್ಲ ಹೊರತು ಅಸಾಮರ್ಥ್ಯದಿಂದಲ್ಲ. ಅದುವರೆಗೆ ತಾನು ಹಿಡಿಯುತ್ತಿದ್ದ ಪ್ರಾಣಿಗಳನ್ನೆಲ್ಲ ತಿಂದುಬಿಡುತ್ತಿದ್ದ ಆ ಸರ್ಪ ಭೀಮಸೇನನಿಗೆ ಮಾತ್ರ ಏನನ್ನು ಮಾಡಲೂ ಸಮರ್ಥವಾಗುವುದಿಲ್ಲ – ಇದರಿಂದ ಸ್ಪಷ್ಟವಾಗುವುದು ಭೀಮಸೇನ ಆ ಸರ್ಪದೆದುರು ನಿಜಕ್ಕೂ ಅಸಮರ್ಥನಾಗಿರಲಿಲ್ಲ ಎಂದು.

## ವಿದ್ಯೋಪಜೀವನ ಸಲ್ಲ

ಭೀಮಸೇನ ಅಜಗರ ಕೇಳಿದ ಪ್ರಶ್ನೆಗಳಿಗೆ ಏತಕ್ಕೆ ಉತ್ತರಿಸಲಿಲ್ಲ? ಎಂಬುದು ಮತ್ತೊಂದು ಆಕ್ಷೇಪ. ಇದರಂತೆಯೇ ಮುಂದೆ ಯಕ್ಷನ ಪ್ರಸಂಗದಲ್ಲಿ ಸಹ ಭೀಮಸೇನ ಏತಕ್ಕೆ ಉತ್ತರ ನೀಡಲಿಲ್ಲ? ಎಂಬುದೂ. ಇದರಿಂದಾಗಿ

ಭೀಮಸೇನನಿಗೆ ಉತ್ತರಿಸುವಷ್ಟು ತಿಳುವಳಿಕೆ ಇರಲಿಲ್ಲ ಎಂಬ ತಪ್ಪು ಕಲ್ಪನೆ ಜನರಲ್ಲಿ ಉಳಿದುಕೊಂಡು ಬಂದಿದೆ.

ಆದರೆ ಭೀಮಸೇನ ಆ ಎರಡೂ ಪ್ರಸಂಗಗಳಲ್ಲಿ ಉತ್ತರ ನೀಡದಿದ್ದ ಹಿನ್ನಲೆಯನ್ನು ಶ್ರೀಮಧ್ವಾಚಾರ್ಯರು ಸ್ಪಷ್ಟಪಡಿಸಿರುವರು – **'ವಿದ್ಯೋಪಜೀವನಂ ಧರ್ಮೋ ವಿಪ್ರಾಣಾಮಪಿ ನೋ ಯತಃ'** – ವಿದ್ಯೆಯನ್ನು ಜೀವನೋಪಾಯವನ್ನಾಗಿ ಬಳಸಿಕೊಳ್ಳುವುದು ಬ್ರಾಹ್ಮಣರಿಗೂ ವಿಹಿತವಲ್ಲ; ಎಂದಮೇಲೆ ಕ್ಷತ್ರಿಯರಿಗೆ ಅದು ಇನ್ನೂ ಹೆಚ್ಚು ನಿಷಿದ್ಧ ಎಂಬ ಧರ್ಮರಹಸ್ಯವನ್ನು ಬಲ್ಲವನಾಗಿದ್ದ ಭೀಮಸೇನ **'ಶುದ್ಧೇ ಭಾಗವತೇ ಧರ್ಮೇ ನಿರತೋ ಯದ್ ವೃಕೋದರಃ'** ಎಂದಿರುವಂತೆ ತಾನು ಅಳವಡಿಸಿಕೊಂಡಿರುವ ಭಾಗವತಧರ್ಮಕ್ಕೆ ಚ್ಯುತಿಯಾಗಬಾರದೆಂದು ಆ ಸಂದರ್ಭಗಳಲ್ಲಿ ಉತ್ತರಿಸಿಲ್ಲ; ಎಂದರೆ ಭೀಮಸೇನ ತಿಳಿಯದೆ ಸುಮ್ಮನಿದ್ದವನಲ್ಲ; ಸುಮ್ಮನಿದ್ದೇ ತಾನು ಪೂರ್ಣವಾಗಿ ತಿಳಿದವನು ಎಂಬುದನ್ನು ಸೂಚಿಸಿರುವನು.

ಅಜಗರ ಪಶ್ನೆಗಳನ್ನು ಕೇಳಿಯಾದ ಮೇಲೆ, ಅವಕ್ಕೆ ಉತ್ತರಿಸಲಿಲ್ಲ ಎಂದಾಗಿದ್ದಲ್ಲಿ ಅವನಿಗೆ ಉತ್ತರ ಗೊತ್ತಿರಲಿಲ್ಲ ಎಂದು ವಾದಿಸಬಹುದಿತ್ತು. ಆದರೆ ಭೀಮಸೇನ ಅದಕ್ಕೆ ಪ್ರಶ್ನೆ ಕೇಳುವ ಅವಕಾಶವನ್ನೇ ನೀಡಲಿಲ್ಲ ಎಂದಮೇಲೆ ಅವನು ಉತ್ತರಿಸದ ಉದ್ದೇಶ ಬೇರೆಯೇ ಎಂಬುದು ಸ್ಪಷ್ಟ.

ಅಜಗರವಾಗಲೀ ಯಕ್ಷನಾಗಲೀ ಪ್ರಶ್ನೆಗಳನ್ನಷ್ಟೆ ಕೇಳಿದ್ದರೆ ಸರ್ವಜ್ಞನಾದ ಭೀಮಸೇನ ಖಂಡಿತ ಉತ್ತರಿಸುತ್ತಿದ್ದ. ಆದರೆ ಅಜಗರ ತನಗೆ ಉತ್ತರ ಹೇಳಿ ಬಿಡುಗಡೆ ಹೊಂದು ಎಂದರೆ ಯಕ್ಷ ತನ್ನ ಪ್ರಶ್ನೆಗೆ ಉತ್ತರ ಹೇಳಿ ನೀರನ್ನು ಕುಡಿಯಬಹುದು ಎನ್ನುವನು. ಹೀಗೆ ಆ ಇಬ್ಬರೂ ವಿದ್ಯೆಗೆ ಕ್ಷುಲ್ಲಕ ಪ್ರಯೋಜನಗಳ ನಂಟನ್ನು ಹಚ್ಚಿದ್ದರಿಂದ ಭೀಮಸೇನ ಅವರಿಗೆ ಉತ್ತರ ನೀಡಲಿಲ್ಲ ಎಂಬುದು ಒಟ್ಟು ತಾತ್ಪರ್ಯ.

ಆ ಎರಡು ಸಂದರ್ಭಗಳಲ್ಲೂ ಪ್ರಶ್ನೆಗಳಿಗೆ ಉತ್ತರ ನೀಡದ ಭೀಮಸೇನ ದೊಡ್ಡ ಧರ್ಮರಹಸ್ಯವನ್ನು ಸ್ಪಷ್ಟಪಡಿಸಿರುವನು – 'ವಿದ್ಯೋಪಜೀವನ ಎಂದೂ ಉಚಿತವಲ್ಲ'. ಬೇರೆ ಯಾವದೇ ಪದಾರ್ಥಕ್ಕೆ ಬೆಲೆ ಕಟ್ಟಬಹುದು; ಆದ್ದರಿಂದಲೇ ಅಷ್ಟು ಬೆಲೆಯ ಮಾಧ್ಯಮದಲ್ಲಿ ಆ ಪದಾರ್ಥದ ವಿನಿಮಯ ನಡೆಸಬಹುದು; ಆದರೆ **'ನ ಹಿ ಜ್ಞಾನೇನ ಸದೃಶಂ ಪವಿತ್ರಮಿಹ ವಿದ್ಯತೇ'** – ಎಂದು ಗೀತೆಯಲ್ಲಿ ಶ್ರೀಕೃಷ್ಣ ಹೇಳಿರುವಂತೆ ವಿದ್ಯೆ ಬೆಲೆ ಕಟ್ಟಲಾಗದಷ್ಟು ಪವಿತ್ರವಾದ ವಸ್ತು. ಅಂತಹುದನ್ನು ಯಾವುದಾದರೂ ವಸ್ತುವಿನ ಮಾಧ್ಯಮದಲ್ಲಿ ವಿನಿಮಯ ನಡೆಸಿದರೆ, ಬಹು

ಅಮೂಲ್ಯದ ಪದಾರ್ಥವನ್ನು ಅಲ್ಪ ಬೆಲೆಗೆ ಮಾರಾಟ ಮಾಡುವ ಮೂಲಕ ಅದನ್ನು ಅವಮಾನಿಸಿದಂತಾಗುವುದು. ಚಿನ್ನದಸರವನ್ನು ಕಬ್ಬಿಣದಸರಕ್ಕೆ ವಿನಿಮಯ ಮಾಡಿಕೊಂಡಂತೆ, ಸಾಲಿಗ್ರಾಮವನ್ನು ದುಡ್ಡಿಗೆ ಮಾರಾಟ ಮಾಡಿದಂತೆ – ಆಗಬಲ್ಲದು. ಈ ಹಿನ್ನೆಲೆಯಲ್ಲಿಯೇ ಶಾಸ್ತ್ರಕಾರರು ವಿದ್ಯೋಪಜೀವನವನ್ನು ಅಧರ್ಮ ಎಂದು ಪರಿಗಣಿಸಿರುವರು. ಈ ರಹಸ್ಯವನ್ನು ಬಲ್ಲ ಭೀಮಸೇನ ಅಜಗರ ಹಾಗೂ ಯಕ್ಷನ ಪ್ರಶ್ನೆಗಳಿಗೆ ಉತ್ತರಿಸಲಿಲ್ಲ ಎಂಬುದು ಇಲ್ಲಿಯ ಮರ್ಮ.

ಕಾಳಿದಾಸನು ತನ್ನ **'ಮಾಳವಿಕಾಗ್ನಿಮಿತ್ರ'** ಎಂಬ ನಾಟಕದಲ್ಲಿ ವಿದ್ಯೆಯನ್ನು ಜೀವನೋಪಾಯದ ಹಾದಿಯನ್ನಾಗಿ ಮಾಡಿಕೊಳ್ಳುವವನನ್ನು ಜ್ಞಾನದಂಗಡಿಯ ವರ್ತಕ ಎಂದಿರುವುದನ್ನು ಇಲ್ಲಿ ಗಮನಿಸಬಹುದು:

**ಯಸ್ಯಾಗಮಃ ಕೇವಲಜೀವಿಕೈವ ತಂ ಜ್ಞಾನಪಣ್ಯಂ ವಣಿಜಂ ವದಂತಿ**

## ಭೀಮೋ ಮಹಾನಸಾಧ್ಯಕ್ಷಃ

ಅಜ್ಞಾತವಾಸದ ಅವಧಿಯಲ್ಲಿ ಭೀಮಸೇನ 'ಮಹಾನಸಾಧ್ಯಕ್ಷ'ನಾಗಿ ವಿರಾಟರಾಜನ ಆಸ್ಥಾನದಲ್ಲಿದ್ದನು. ಯಾಕೆ ಭೀಮಸೇನ ಅಡುಗೆಮನೆಯ ಕೆಲಸವನ್ನು ಆರಿಸಿಕೊಂಡ? ಹೆಚ್ಚಿನವರು ತಿಳಿದಿರುವುದು – ಹೊಟ್ಟೆಬಾಕನಾಗಿದ್ದ ಭೀಮಸೇನ ತಿನ್ನಲಿಕ್ಕೆ ಅನುಕೂಲವಾಗುವುದೆಂದು ಅಡುಗೆಮನೆಯನ್ನು ಸೇರಿಕೊಂಡನೆಂದು.

ಆದರೆ ಶ್ರೀಮದಾಚಾರ್ಯರು ನಿರ್ಣಯಿಸಿರುವರು –

**ಪರಪಾಕೋ ಗೃಹಸ್ಥಸ್ಯ ಕ್ಷತ್ರಿಯಸ್ಯ ವಿಶೇಷತಃ ।**
**ನ ಯೋಗ್ಯ ಇತಿ ಸೂದಸ್ಯ ವೇಷಂ ಬಭ್ರೇ ವೃಕೋದರಃ ॥**

ಗೃಹಸ್ಥನು ಪರಪಾಕವನ್ನು ಸ್ವೀಕರಿಸಬಾರದು; ಕ್ಷತ್ರಿಯರಂತೂ ವಿಶೇಷವಾಗಿ ಸ್ವೀಕರಿಸಲೇಬಾರದು; ಅದಕ್ಕೇ ತಾನೇ ಅಡುಗೆಕಾರ್ಯ ವಹಿಸಿಕೊಂಡು 'ಸ್ವಯಂಪಾಕ'ದ ಅನ್ನವನ್ನೇ ಸ್ವೀಕರಿಸಬೇಕೆಂದು ಭೀಮಸೇನ ಹಾಗೆ ನಡೆದುಕೊಂಡನು.

ಭೀಮಸೇನ ಆಗ ಮಾತ್ರ ಮಹಾನಸಾಧ್ಯಕ್ಷನಾದುದಲ್ಲ; ರಾಜಸೂಯಯಾಗದ ಪ್ರಸಂಗದಲ್ಲೂ **'ಭೀಮೋ ಮಹಾನಸಾಧ್ಯಕ್ಷಃ'** – ಎಂದಿರುವಂತೆ ಅವನು 'ಮಹಾನಸಾಧ್ಯಕ್ಷ'ನಾಗಿ ಕಾರ್ಯ ನಿರ್ವಹಿಸಿದ್ದನು. ಶ್ರೀಕೃಷ್ಣ ಅವನಿಗೆ ಆ ಜವಾಬ್ದಾರಿಯನ್ನು ವಹಿಸಿದ್ದನು. ಆ ಸಂದರ್ಭದಲ್ಲಿ ಭೀಮಸೇನ ಮಹಾನಸಾಧ್ಯಕ್ಷನಾಗಿದ್ದುದರಿಂದಲೇ ರಾಜಸೂಯಯಾಗದಲ್ಲಿ ಪಾಲ್ಗೊಂಡ

ಕೋಟಿಗಟ್ಟಲೆ ಜನರಲ್ಲಿ ಯಾರಿಗೂ ಯಾವುದೇ ಬಗೆಯ ಆರೋಗ್ಯಹಾನಿ ಆಗಿರಲಿಲ್ಲ.

ವಿದ್ಯಾಭ್ಯಾಸದಲ್ಲಿ ವಿಶೇಷವಾಗಿ ತೊಡಗಬೇಕಾದ ಬ್ರಹ್ಮಚಾರಿ, ಅಗ್ನಿಯನ್ನೇ ತ್ಯಜಿಸಿರುವ ಸನ್ಯಾಸಿ ಪರಪಾಕವನ್ನೇ ಅವಲಂಬಿಸಬೇಕಾದಂತೆ, ಗೃಹಸ್ಥನಾದವನು ಸ್ವಯಂಪಾಕವನ್ನೇ ಸ್ವೀಕರಿಸಬೇಕು; ಇದೇನೂ ಪ್ರತಿಷ್ಠೆಯ ದೃಷ್ಟಿಯಿಂದಲ್ಲ; ಪರಪಾಕವನ್ನವಲಂಬಿಸಬೇಕಾದ ಬ್ರಹ್ಮಚಾರಿಗಳಿಗೆ, ಸನ್ಯಾಸಿಗಳಿಗೆ ಆಶ್ರಯಕೊಡಬೇಕಾದುದರಿಂದ ಗೃಹಸ್ಥನಾದವನು ಸ್ವಯಂಪಾಕವನ್ನೇ ಅವಲಂಬಿಸಬೇಕೆಂದು ವಿಧಿಸಲಾಗಿದೆ. ಭೀಮಸೇನ ಈ ದೃಷ್ಟಿಯಿಂದಲೇ ಸ್ವಯಂಪಾಕಕ್ಕೆ ಅವಕಾಶವಿರುವ ಸೂದನ ಪಾತ್ರವನ್ನೇ ವಹಿಸಿದ್ದನು. ಯುಧಿಷ್ಠಿರಾದಿಗಳು ಬೃಹನ್ನಳೆ ಮುಂತಾದ ಪಾತ್ರವನ್ನು ವಹಿಸಲು ಅನಿವಾರ್ಯತೆ ಕಾರಣವಾಗಿದ್ದರೆ, ಭೀಮ ಮಹಾನಸಾಧ್ಯಕ್ಷನಾಗಲು ಧರ್ಮಪ್ರಜ್ಞೆ ಕಾರಣವಾಯಿತು.

ವಿರಾಟರಾಜ ಭೀಮಸೇನನನ್ನು ತನ್ನ ಆಸ್ಥಾನದಲ್ಲಿ 'ಬಲ್ಲವ' (ಜನ ತಿಳಿದಿರುವಂತೆ 'ವಲಲ' ಎಂದಲ್ಲ)ನನ್ನಾಗಿ ಅಂದರೆ ಅಡುಗೆಯವನನ್ನಾಗಿ ಆರಿಸಿಕೊಳ್ಳುವ ಮುಂಚೆ ಅವನ ಪಾಕದ ವೈಶಿಷ್ಟ್ಯವನ್ನು ವಿಚಾರಿಸುವನು. ಅದಕ್ಕೆ ಭೀಮಸೇನ ಕೊಡುವ ಉತ್ತರ –

**ಯೋ ಭುಂಕ್ತೇ ಪಾಕಮಸ್ಮಾಕಂ ಸಕೃದ್ ವಾ ಮತ್ಸ್ಯಭೂಪತೇ ।**
**ತಸ್ಯ ಶೀರ್ಷ್ಣಿ ನ ಜಾಯೇರನ್ ಶ್ವೇತರೋಮಾಣಿ ಕರ್ಹಿಚಿತ್ ॥**

ತನ್ನ ಅಡುಗೆಯನ್ನು ಒಮ್ಮೆ ಉಂಡರೂ ಸಾಕು; ಅಂತಹವನ ತಲೆಗೂದಲು ಎಂದೂ ಕಪ್ಪಾಗಿಯೇ ಇರುವುದು; ಎಂದೂ ಬೆಳ್ಳಗಾಗುವುದೇ ಇಲ್ಲ; ಅಂದರೆ ವೃದ್ಧಾಪ್ಯ ಬರುವುದೇ ಇಲ್ಲ. ಚಿರಯೌವನದಲ್ಲಿಯೇ ಇರುವನು ಎಂದರ್ಥ.

ಸರಿ; ಮುಂದೆ ಬೆಳ್ಳಗಾಗುವುದಿಲ್ಲ; ಈಗಾಗಲೇ ವೃದ್ಧರಾಗಿದ್ದು ಬೆಳ್ಳಗಾಗಿದ್ದರೆ ಅಂತಹವರಿಗೆ ಆ ಅಡುಗೆಯಿಂದ ಏನಾದರೂ ಪ್ರಯೋಜನವಿದೆಯೇ? ಎಂದರೆ, '**ಸ ಸ್ಯಾತ್ ಪುನಃ ಕೃಷ್ಣಶಿರೋರುಹಃ**'– ಅವನ ಬಿಳಿಗೂದಲು ಪುನಃ ಕಪ್ಪಾಗುವುದು; ಅವನ ವೃದ್ಧಾಪ್ಯ ಹೋಗಿ ಯೌವನ ಸಿದ್ಧಿಸುವುದು. 'ಹೇರ್ ಡೈ' ಬೆಳ್ಳಗಿನ ಕೂದಲನ್ನು ಕಪ್ಪಗೆ ತೋರಿಸಬಲ್ಲದೇ ಹೊರತು ಅದರಿಂದ ಅದು ಸಹಜವಾಗಿ ಕಪ್ಪಗಾಗದು. ಸಹಜವಾಗಿಯೇ ಅದು ಕಪ್ಪಗಾಗುವುದಾದರೆ, ಜನ ಮತ್ತೆ ಮತ್ತೆ ಅದನ್ನು ಬಳಿದುಕೊಳ್ಳುತ್ತಿರಲಿಲ್ಲ ತಾನೇ?

**'ಯುಕ್ತಾಹಾರವಿಹಾರಸ್ಯ...ಯೋಗೋ ಭವತಿ ದುಃಖಹಾ'** – ಎಂಬುದಾಗಿ ಉತ್ತಮ ಆಹಾರದ ಸೇವನೆ ನಡೆಸುವವನು ಯೋಗಿ ಆಗುವನೆಂದು ಗೀತೆಯಲ್ಲಿ ತಿಳಿಸಲಾಗಿದೆ. ಭೀಮಸೇನನ ಅಡುಗೆಯ ಆಹಾರವೂ ಅಂತಹದ್ದೆಂದ ಮೇಲೆ, ಅದನ್ನು ಸೇವಿಸುವವನು 'ಯೋಗಿ' ಆಗುವನು.

ಹೀಗೆ ವಿರಾಟನ ಆಸ್ಥಾನದಲ್ಲಿ **'ಪಾಚಕ'**ನಾಗಿದ್ದ ಭೀಮಸೇನ ಮುಂದೆ **'ಪಾಜಕ'**ದಲ್ಲಿ ಅವತರಿಸುವನು. ಶ್ರೀಮಧ್ವಾಚಾರ್ಯರಾಗಿ ಅವತರಿಸಿದಾಗಲೂ ಅವರು **'ಪಾಚಕವೃತ್ತಿ'** ಯನ್ನು ಮುಂದುವರೆಸಿದ್ದರು. 'ಅನುಭವದ ಅಡುಗೆಯನ್ನು ಮಾಡಿ..' ಎಂಬುದಾಗಿ ಪುರಂದರದಾಸರು ತಿಳಿಸಿರುವಂತೆ ಅನುಭವದ ಆಧಾರದಲ್ಲಿ ನಿಂತಿರುವ ಶಾಸ್ತ್ರವನ್ನು ನೀಡಿ ಅನುಗ್ರಹಿಸಿರುವರು. ಈ ಪಾಕವನ್ನು ಉಂಡವರಿಗೂ ವೃದ್ಧಾಪ್ಯ ಬರುವುದಿಲ್ಲ. **'ಚಿಂತಾ ದಹತಿ ದೇಹಿನಮ್'** – ಎಂದಿರುವಂತೆ ಚಿಂತೆಯೇ ವೃದ್ಧಾಪ್ಯಕ್ಕೆ ಮೂಲ. 'ಆನಂದತೀರ್ಥ' ಎಂದೇ ಪ್ರಸಿದ್ಧರಾಗಿರುವ ಶ್ರೀಮಧ್ವಾಚಾರ್ಯರು ಒಳ್ಳೆಯ ತತ್ತ್ವಜ್ಞಾನವನ್ನು ನೀಡಿ, ಚಿಂತೆ ಬಾರದಂತೆ ಆನಂದವನ್ನು ಅನುಗ್ರಹಿಸುವರು. ಅದರಿಂದಾಗಿ ವೃದ್ಧಾಪ್ಯ ದೂರವಾಗುವುದು. ಇದಕ್ಕೆ ನೂರಾಇಪ್ಪತ್ತುವರ್ಷಗಳಷ್ಟು ದೀರ್ಘಕಾಲ ದೃಢಕಾಯರಾಗಿ ಬಾಳಿದ ಶ್ರೀವಾದಿರಾಜ ಸ್ವಾಮಿಗಳಂತಹವರು ಉತ್ತಮ ನಿದರ್ಶನ.

ಬ್ರಾಹ್ಮಣಾದಿ ದ್ವಿಜವೇಷದಲ್ಲಿದ್ದರೆ ವೈದಿಕವ್ಯವಹಾರದಲ್ಲಿ ಪಾಲ್ಗೊಳ್ಳಬೇಕಾಗುವುದು. ಆಗ ಅಪ್ರತಿಮ ವೇದಜ್ಞಾನಿಯಾದ ಭೀಮಸೇನನ ಗುರುತು ಆ ಅಜ್ಞಾತವಾಸಕಾಲದಲ್ಲಿ ಜನಗಳಿಗೆ ತಿಳಿಯುವ ಅಪಾಯವೂ ಉಂಟು ಎಂಬ ಮತ್ತೊಂದು ಕಾರಣವನ್ನು ಸಹ ಭೀಮಸೇನನ ಸೂದವೇಷಕ್ಕೆ ಮಹಾಭಾರತತಾತ್ಪರ್ಯನಿರ್ಣಯವು ನೀಡಿದೆ.

ವಿರಾಟಪರ್ವದಲ್ಲಿ ಶಿವನ ವರದ ಬಲವಿದ್ದ ಜೀಮೂತನನ್ನೂ, ರುದ್ರನ ವರಬಲವಿದ್ದ, ಕೀಚಕ ಹಾಗೂ ಅವನ ನೂರೈದು ಮಂದಿ ತಮ್ಮಂದಿರನ್ನೂ ಭೀಮಸೇನನು ಸಂಹಾರ ಮಾಡಿರುವನು. ಬಾಣ ಎಂಬ ಅಸುರನೇ ಕೀಚಕನಾಗಿದ್ದ; ಅವನನ್ನು ನರ್ತನಶಾಲೆಗೆ ಬರುವಂತೆ ಮಾಡಿ ಸಂಹಾರ ಮಾಡಿದನು;; ದ್ರೌಪದಿಯನ್ನು ಸ್ಮಶಾನದೆಡೆಗೆ ಕರೆದೊಯ್ಯುತ್ತಿದ್ದಾಗ, ದ್ರೌಪದಿಯ ಕೂಗಿನ ದನಿಯನ್ನು ಕೇಳಿ ಕೂಡಲೇ ಅಲ್ಲಿಗೆ ಸಾಗಿ ಉಪಕೀಚಕರನ್ನೂ ಸಂಹರಿಸುವನು.

ಹೀಗೆ ವಿರಾಟಪರ್ವದಲ್ಲಿ ಭೀಮಸೇನನಿಂದ ಜೀಮೂತ, ಕೀಚಕಾದಿಗಳ ಸಂಹಾರ, ಧರ್ಮರಕ್ಷಣೆ, ದಕ್ಷಿಣಗೋಗ್ರಹಣದಲ್ಲಿ ವಿರಾಟನ ರಕ್ಷಣೆ– ಮುಂತಾದ

ಮಹಿಮೆಗಳ ಪ್ರಕಟಣೆ ಆಗಿದೆ. ಉತ್ತರ ಗೋಗ್ರಹಣದಲ್ಲಿ ಅರ್ಜುನ ಹನುಮಧ್ವಜರಥ, ಗಾಂಡೀವ ಧನುಸ್ಸು ಮೊದಲಾದವುಗಳ ಸಹಾಯದಿಂದ ಬಿಡುಗಡೆ ಮಾಡಿದ ಗೋವುಗಳ ಸಂಖ್ಯೆ ಅರವತ್ತು ಸಾವಿರ; ಆದರೆ ದಕ್ಷಿಣ ಗೋಗ್ರಹಣದಲ್ಲಿ ಭೀಮಸೇನ ಬಿಡುಗಡೆ ಮಾಡಿದ ಗೋವುಗಳ ಸಂಖ್ಯೆ ಒಂದು ಲಕ್ಷ; ಅದೂ ನಿರಾಯುಧನಾಗಿ ಯಾರ ನೆರವೂ ಇಲ್ಲದೆ. ಇದನ್ನು ಗಮನಿಸಿದರೆ **'ಭೀಮಸೇನ ಸಮೋ ನಾಸ್ತಿ..'** ಎಂಬ ಮಾತು ಮತ್ತಷ್ಟು ಸ್ಪಷ್ಟವಾಗುವುದು.

## ಭೀಮನ ತಾತ್ತ್ವಿಕ ದೃಷ್ಟಿ

ಉದ್ಯೋಗಪರ್ವದಲ್ಲಿ ಶ್ರೀಕೃಷ್ಣನು ಸಂಧಾನದ ನಾಟಕಕ್ಕಾಗಿ ಹೊರಡುವ ಒಂದು ಪ್ರಸಂಗ. ಅವನು ಸಂಧಾನದ ಬಗ್ಗೆ ವಿಚಾರಿಸಿದಾಗ ಭೀಮಸೇನ ಬೇಕಾದಲ್ಲಿ ತಾನೂ ಸಂಧಾನಕ್ಕೆ ಸಿದ್ಧ ಎಂದು ತಿಳಿಸುವನು. ಭಟ್ಟನಾರಾಯಣ ತನ್ನ 'ವೇಣೀಸಂಹಾರ' ನಾಟಕದಲ್ಲಿ ಸಂಧಾನಕ್ಕೆ ಒಪ್ಪದ ಭೀಮಸೇನ ಯುಧಿಷ್ಠಿರನ ಜೊತೆಗೆ ಧಿಕ್ಕರಿಸಿ ಮಾತನಾಡುವವನನ್ನಾಗಿ ಮೂಲಭಾರತಕ್ಕೆ ವಿರುದ್ಧವಾಗಿ ಚಿತ್ರಿಸಿರುವನು. ಆದರೆ ಮೂಲಭಾರತದಲ್ಲಿ ಭೀಮಸೇನ ಒಪ್ಪಿಕೊಳ್ಳುವನು. ತನಗೆ ದುರ್ಯೋಧನಾದಿಗಳ ಜೊತೆಗೆ ತಾತ್ತ್ವಿಕದ್ವೇಷವೇ ಹೊರತು ವೈಯಕ್ತಿಕವಾದುದಲ್ಲ. ವೈಯಕ್ತಿಕಹಗೆಗಾಗಿ ಭೀಮಸೇನ ಯುದ್ಧಕ್ಕೆ ಪ್ರೇರಣೆ ನೀಡಿದನೆಂದು ಲೋಕದ ಜನರು ತಪ್ಪು ತಿಳಿಯಬಾರದೆಂದು ಭೀಮಸೇನ ಸಂಧಾನಕ್ಕೆ ತನ್ನ ಒಪ್ಪಿಗೆಯೂ ಇದೆ ಎಂದೇ ತಿಳಿಸುವನು.

## ಶ್ರೀಕೃಷ್ಣನಿಂದ ಭೀಮಬಲದ ಪ್ರಶಂಸೆ

ಭೀಮನ ಈ ಪ್ರತಿಕ್ರಿಯೆಯನ್ನು ಕಂಡು ಎಲ್ಲರಿಗೂ ಆಶ್ಚರ್ಯ. ಭೀಮಸೇನ ಯಾಕೆ ಭಯಪಟ್ಟು ಹೀಗೆ ಸಂಧಾನಕ್ಕೆ ಒಪ್ಪಿರುವೆಯೋ ? ಎಂದು ಅವನ ಅಂತರ್ಯವನ್ನು ಪ್ರಕಟಿಸಲೆಂದು ಸರ್ವಜ್ಞನಾದ ಶ್ರೀಕೃಷ್ಣ ವಿಚಾರಿಸುವನು. ಆಗ ಭೀಮ ನುಡಿದ ಉತ್ತರ ಸ್ವಾರಸ್ಯವಾದುದು– **'ಸರ್ವಥಾऽನಾರ್ಯಕರ್ಮೈತತ್ ಪ್ರಶಂಸಾ ಸ್ವಯಮಾತ್ಮನಃ'** ಆತ್ಮಪ್ರಶಂಸೆ ಉತ್ತಮವ್ಯಕ್ತಿಗಳಿಗೆ ಹೇಳಿಸಿದ್ದಲ್ಲ – ಎಂದು ನನಗೆ ತಿಳಿದಿದೆ. ಆದರೂ ಅನಿವಾರ್ಯವಾಗಿ ನನ್ನ ಬಲವನ್ನು ನಿನ್ನ ಎದುರು ತಿಳಿಸಬೇಕಾಗಿದೆ – **'ಅತಿವಾದಾಪವಿದ್ಧಸ್ತು ವಕ್ಷ್ಯಾಮಿ ಬಲಮಾತ್ಮನಃ'**

ನಿನ್ನ ದಯೆ ಒಂದಿದ್ದಲ್ಲಿ ಇಡೀ ಬ್ರಹ್ಮಾಂಡವನ್ನೇ ಬೇಕಾದರೂ ಒಡೆದು ತಾಳದಂತೆ ಬಾರಿಸಬಲ್ಲೆ – ಎಂಬುದಾಗಿ ಭೀಮಸೇನ ತನ್ನ ಸಾಮರ್ಥ್ಯಾತಿಶಯವನ್ನು ಅಲ್ಲಿ ನೆರೆದಿದ್ದ ರಾಜರಿಗಾಗಿ ಪರಿಚಯಿಸಿಕೊಡುವನು. ಒಂದು ಹೆಡೆಯಲ್ಲಿ

ಬ್ರಹ್ಮಾಂಡವನ್ನು ಧರಿಸಿರುವ ಸಾವಿರ ಹೆಡೆಗಳ ಶೇಷನಿಗೆ ಕೂರ್ಮರೂಪದಿಂದ ಆಧಾರನಾಗಿರುವ ವಾಯುದೇವನ ಅವತಾರನಾದ ಭೀಮಸೇನನಿಗೆ ಇದೇನೂ ಅಸಾಧ್ಯವಾದುದಲ್ಲ.

ಭೀಮಸೇನ ಹೀಗೆ ತನ್ನ ಬಲಪೌರುಷಗಳನ್ನು ತಿಳಿಸಿದಾಗ ಶ್ರೀಕೃಷ್ಣನ ಪ್ರತಿಕ್ರಿಯೆ:

**ಯತ್ಕಿಂಚಾತ್ಮನಿ ಕಲ್ಯಾಣಂ ಸಂಭಾವಯಸಿ ಪಾಂಡವ।**
**ಸಹಸ್ರಗುಣಮಪ್ಯೇತತ್ ತ್ವಯಿ ಸಂಭಾವಯಾಮ್ಯಹಮ್॥**

'ನೀನೀಗ ತಿಳಿಸಿರುವುದಕ್ಕಿಂತ ಸಾವಿರ ಪಟ್ಟು ಮಿಗಿಲಾದ ಹಿರಿಮೆ ನಿನ್ನಲ್ಲಿದೆ ಎಂಬುದನ್ನು ನಾನು ಬಲ್ಲೆ'. ಶ್ರೀಕೃಷ್ಣ ಈ ಬಗೆಯ ಪ್ರಶಂಸೆಯನ್ನು ಬೇರೆ ಯಾರ ಬಗ್ಗೆಯೂ ಮಾಡಿಲ್ಲ. ಅರ್ಜುನ ತನ್ನ ಬಗ್ಗೆ ಅತಿಯಾಗಿ ಪ್ರಶಂಸೆ ಮಾಡಿಕೊಂಡಾಗ ಶ್ರೀಕೃಷ್ಣ ಅದನ್ನು ನಿರಾಕರಿಸುತ್ತಿದ್ದ. ಆದರೆ ಭೀಮಸೇನ ತನ್ನ ಬಗ್ಗೆ ಇಂತಹ ಮಾತನ್ನು ಹೇಳಿಕೊಂಡರೂ ಕೃಷ್ಣ ಅದಕ್ಕೆ ಇನ್ನಷ್ಟು ಮೆರಗು ಕೊಟ್ಟಿರುವನು; ಮಹಾಭಾರತದ ಎಲ್ಲ ಪ್ರತಿಗಳಲ್ಲೂ ಈ ಮಾತುಗಳು ಬಂದಿವೆ. ಆದರೆ ಶ್ರೀಮಧ್ವರ ಹೊರತು ಬೇರೆ ಯಾವ ಕವಿಗಳೂ, ಚಿಂತಕರೂ ಇದಕ್ಕೆ ಒತ್ತು ನೀಡಿದ್ದಿಲ್ಲ.

ಹೇಗೆ ರಾಮಾಯಣದಲ್ಲಿ ಶ್ರೀರಾಮಚಂದ್ರನು – ಆಂಜನೇಯನು ಸಲ್ಲಿಸಿರುವಂತಹ ಸೇವೆಯನ್ನು ಉಳಿದವರು ಮನಸ್ಸಿನಲ್ಲಿ ಊಹಿಸಲೂ ಸಾಧ್ಯವಾಗದು ಎಂದು ಪ್ರಶಂಸಿಸಿರುವನೋ, ಹಾಗೆ ಇಲ್ಲಿ ಶ್ರೀಕೃಷ್ಣನು ಭೀಮನನ್ನು ಪ್ರಶಂಸಿಸಿರುವನು:

**ಕೃತಂ ಹನುಮತಾ ಕಾರ್ಯಂ ಸುಮಹದ್ಭುವಿ ದುರ್ಲಭಮ್ ।**
**ಮನಸಾಽಪಿ ಯದನ್ಯೇನ ನ ಶಕ್ಯಂ ಧರಣೀತಲೇ ॥**

ಶ್ರೀವೇದವ್ಯಾಸರು ಶ್ರೀಮಧ್ವರ ಗೀತಾಭಾಷ್ಯದ **'ಶಕ್ತಿತಃ'** ಪದದ ಬದಲು **'ಲೇಶತಃ'** ಎಂಬ ಪದದ ಬಳಕೆ ಆಗಬೇಕೆಂದು ತಿಳಿಸುವ ಮೂಲಕ ಹೀಗೆಯೇ ಪ್ರಶಂಸಿಸಿರುವರು.

## ಭೀಮನ ಮನೆಯಲ್ಲೇ ಊಟ

ಸಂಧಾನಕ್ಕೆ ತೆರಳಿದ ಶ್ರೀಕೃಷ್ಣನು ಭೀಷ್ಮಾದಿಗಳ ಮನೆಗೆ ಅವರು ಆಹ್ವಾನಿಸಿದರೂ ಹೋಗುವುದಿಲ್ಲ; ಭೀಷ್ಮ ಕೃಷ್ಣನಿಗೆ ಅಗ್ರಪೂಜೆಯನ್ನು ಮಾಡಿಸಿದ್ದಿರಬಹುದು. ಆದರೆ ದ್ರೌಪದಿಗೆ ಅವಮಾನವಾದಾಗ ಅದನ್ನು

ಪ್ರತಿಭಟಿಸಿಲ್ಲ. ಆ ಮೂಲಕ ಭಗವದ್ಭಕ್ತಿಗೆ ಮಾನ್ಯತೆಯನ್ನು ನೀಡಲಿಲ್ಲ.. ಎಂದು. ಆದರೆ ವಿದುರ ದುರ್ಯೋಧನಾದಿಗಳ ಆಕ್ರಮಣವನ್ನೇನೂ ತಪ್ಪಿಸಲಿಲ್ಲ. ಆದರೆ ದ್ರೌಪದಿಗೆ ಆದ ಅಪಚಾರವನ್ನು ಪ್ರತಿಭಟಿಸಿದ. ಇಷ್ಟು ಮಾತ್ರಕ್ಕೆ ಅವನ ಬಗ್ಗೆ ಸಂತುಷ್ಟನಾದ ಶ್ರೀಕೃಷ್ಣ ಆ ರಾತ್ರಿ ಅವನ ಮನೆಯಲ್ಲಿಯೇ ಇದ್ದು ಅವನ ಆತಿಥ್ಯವನ್ನು ಸ್ವೀಕರಿಸುವನು. ಭೀಮಸೇನ ದ್ರೌಪದಿಯ ಅನ್ಯಾಯವನ್ನು ಮಾತಿನಲ್ಲಿ ಮಾತ್ರ ಪ್ರತಿಭಟಿಸಿದ್ದಲ್ಲ ಅದಕ್ಕಾಗಿಯೇ ಉಗ್ರವಾದ ಪ್ರತಿಜ್ಞೆಮಾಡಿ, ಅದರಂತೆ ಮುಂದೆ ದುರ್ಯೋಧನಾದಿಗಳ ಸಂಹಾರವನ್ನೂ ನಡೆಸಿರುವವನೆಂದಮೇಲೆ ಶ್ರೀಕೃಷ್ಣನಿಗೆ ಭೀಮಸೇನನ ಮೇಲೆ ಎಷ್ಟು ಪ್ರೀತಿ ಇದ್ದಿರಬೇಕು! ಆದುದರಿಂದಲೇ ಶ್ರೀಕೃಷ್ಣ ಭೀಮಸೇನನ ಆತಿಥ್ಯವನ್ನೇ ಸದಾ ಸ್ವೀಕರಿಸುವನು. ಆ ಕಾರಣದಿಂದಲೇ ನಾವು **'ಭಾರತೀರಮಣ ಮುಖ್ಯಪ್ರಾಣಾಂತರ್ಗತ'** ಎಂದು ಭೀಮಸೇನನ ಮೂಲರೂಪವನ್ನು ಉಲ್ಲೇಖಿಸಿಯೇ ಶ್ರೀಹರಿಗೆ ನೈವೇದ್ಯಾದಿಗಳನ್ನು ಸಮರ್ಪಣೆ ಮಾಡುವೆವು:

**– 'ವಾಯೌ ಮುಖ್ಯ ಧಿಯಾ'** **– (ಭಾರತ)**

## ಗೀತೆಯಂತೆಯೇ ಪ್ರಮಾಣ

ಶ್ರೀಕೃಷ್ಣನು ಕೌರವಸಭೆಯಲ್ಲಿ ಸಂಧಾನದ ಅವಶ್ಯಕತೆಯನ್ನು ಪ್ರತಿಭಟಿಸುತ್ತ ದುರ್ಯೋಧನನಿಗೆ ಹೇಳುವ ಒಂದು ಮಾತು ಹೀಗಿದೆ:

**ನ ಹೀಮೇ ಸರ್ವರಾಜಾನಃ ಪರ್ಯಾಪ್ತಾಃ ಸಹಿತಾಸ್ತ್ವಯಾ ।**
**ಕ್ರುದ್ಧಸ್ಯ ಭೀಮಸೇನಸ್ಯ ಪ್ರೇಕ್ಷಿತುಂ ಮುಖಮಾಹವೇ ॥**

'ದುರ್ಯೋಧನ! ಭೀಷ್ಮಾದಿಗಳಿಂದ ನಿನ್ನ ರಕ್ಷಣೆಯಾಗುವುದು ಎಂದು ಭಾವಸಿರುವೆ; ಆದರೆ ನೀನಾಗಲೀ ಇವರಾಗಲೀ ಒಟ್ಟಾಗಿ ಸೇರಿಯೂ ಕೋಪಗೊಂಡ ಭೀಮನ ಮುಖವನ್ನು ನೋಡಲೂ ಶಕ್ತಿ ಸಾಲದವರು.' ಯುದ್ಧ ಮಾಡುವುದಿರಲಿ ಮುಖನೋಡುವುದಕ್ಕೂ ಇತರರಿಗೆ ಸಾಧ್ಯವಾಗದು. ರುದ್ರಾದಿ ದೇವತೆಗಳ ಮನಸ್ಸುಗಳನ್ನು ಕಲುಸಿತಗೊಳಿಸಬಲ್ಲ ಕಲಿ ಭೀಮನ ಮುಖವನ್ನು ನೋಡಲೂ ಸಮರ್ಥನಾಗಲಾರ ಎಂಬ ಮಾತಿನಲ್ಲಿ **'ಆಖಣಾಶ್ಮಸಮ'** ಎಂಬ ಭೀಮನ ಹಿರಿಮೆ ನಿರೂಪಿತವಾಗಿರುವುದನ್ನು ಗಮನಿಸಬೇಕು.

ಭಗವದ್ಗೀತೆ ಶ್ರೀಕೃಷ್ಣನ ಬಾಯಿಯಿಂದ ಹೊರಹೊಮ್ಮಿದುದರಿಂದ ಅದಕ್ಕೆ ಪ್ರಾಮಾಣ್ಯ ಒಪ್ಪುವುದಾದರೆ, ಶ್ರೀಕೃಷ್ಣನ ಬಾಯಿಯಿಂದ ಬಂದಿರುವ (ಮಹಾಭಾರತದ ಎಲ್ಲ ಪ್ರತಿಗಳಲ್ಲೂ ಇರುವ) ಈ ಭೀಮಪ್ರಶಂಸೆಯನ್ನೂ ಪರಮಪ್ರಾಮಾಣಿಕವೆಂದು ಒಪ್ಪಲೇ ಬೇಕು ತಾನೆ?

ಮುಂದೆ ಸ್ವತಃ ದುರ್ಯೋಧನನೇ :

**'ಪರ್ಯಾಪ್ತಂ ತ್ವಿದಮೇತೇಷಾಂ ಬಲಂ ಭೀಮಾಭಿರಕ್ಷಿತಮ್'**

'ಭೀಮಸೇನ ಸಂರಕ್ಷಿತವಾದ ಈ ಪಾಂಡವ ಸೇನೆ ನಮ್ಮನ್ನು ಗೆಲ್ಲಲು ಸಮರ್ಥವಾಗಿದೆ' ಎನ್ನುವುದು ಇದಕ್ಕೆ ಪೂರಕವಾಗಿದೆ.

## ಕುರುಕ್ಷೇತ್ರ ಯುದ್ಧದಲ್ಲಿ ಭೀಮಸೇನನ ಪಾತ್ರ

ಮಹಾಭಾರತದ ಯುದ್ಧದಲ್ಲಂತೂ ಹೆಜ್ಜೆಹೆಜ್ಜೆಗೂ ಭೀಮಸೇನನ ಪಾತ್ರ ಎದ್ದು ಕಾಣುವುದು.

ಅರ್ಜುನ ಯುದ್ಧದ ಪ್ರಾರಂಭದಲ್ಲಿ **'ಅಹೋ ಬತ ಮಹತ್ಪಾಪಂ ಕರ್ತುಂ ವ್ಯವಸಿತಾ ವಯಮ್'** – ಎಂಬುದಾಗಿ ಧಾರ್ಮಿಕ ಯುದ್ಧವನ್ನು ಪಾಪಕಾರ್ಯ ಎಂದು ಸಂದೇಹಿಸಿದ್ದ. ಅವನನ್ನು ಸರಿಪಡಿಸಲು ಶ್ರೀಕೃಷ್ಣನ ಉಪದೇಶ ಬೇಕಾಯಿತು. ಯುಧಿಷ್ಠಿರನಿಗೆ ಭೀಮಸೇನ ಮೊದಲೇ ಉಪದೇಶ ನೀಡಿ ಯುದ್ಧಕ್ಕೆ ಅಣಿಗೊಳಿಸಿದ್ದ. ಆದರೂ ಯುದ್ಧದ ಬಳಿಕ ಆ ಧಾರ್ಮಿಕ ಯುದ್ಧದ ಬಗ್ಗೆ ಪಶ್ಚಾತ್ತಾಪಪಡುವ ಮೂಲಕ ಪುಣ್ಯವನ್ನು ಕಳೆದುಕೊಳ್ಳುವನು. ಒಳ್ಳೆಯ ಕೆಲಸದ ಬಗ್ಗೆ ಪಶ್ಚಾತ್ತಾಪ ಪಡಬಾರದು. ಕೆಟ್ಟ ಕೆಲಸದ ಬಗ್ಗೆ ಪಶ್ಚಾತ್ತಾಪ ಪಡದೆ ಇರಬಾರದು. ಶ್ರೀಕೃಷ್ಣನ ಪ್ರಸಾದ ಸ್ವೀಕರಿಸಿ, 'ಅಯ್ಯೋ ತಿನ್ನಬಾರದಿತ್ತು' ಎಂದು ಅಂದುಕೊಂಡರೆ ಸಾಕು; ಪುಣ್ಯ ಕಡಿಮೆಯಾಗುವುದು. ಯುಧಿಷ್ಠಿರ ಮಹಾಭಾರತಯುದ್ಧದ ಬಗ್ಗೆ ಪಶ್ಚಾತ್ತಾಪಪಟ್ಟು ಹೀಗೆ ಪುಣ್ಯವನ್ನು ಕಡಿಮೆ ಮಾಡಿಕೊಂಡ. ಆದರೆ ಭೀಮಸೇನ ಯುದ್ಧದ ಬಗ್ಗೆ ಯಾವುದೇ ಸಂದರ್ಭದಲ್ಲೂ ಸಂಶಯಪಡದೆ ಪೂರ್ಣಮನಸ್ಸಿನಿಂದ ಕಾದಾಡಿ ಅದರ ಪೂರ್ಣಪುಣ್ಯಕ್ಕೆ ಪಾತ್ರನಾಗಿದ್ದ. ಮಹಾಭಾರತಯುದ್ಧ ಪ್ರಾರಂಭವಾದಾಗ ರಣರಂಗದಲ್ಲಿ ಮೊದಲ ಹೆಜ್ಜೆ ಹಾಕಿ ಹೋರಾಟ ಆರಂಭಿಸಿದವನೂ ಭೀಮನೇ. ದುರ್ಯೋಧನನನ್ನು ಸಂಹರಿಸುವ ಮೂಲಕ ಮಹಾಭಾರತಯುದ್ಧಕ್ಕೆ ಮಂಗಳ ಹಾಡಿದವನೂ ಭೀಮನೇ.

ಅರ್ಜುನನನ್ನು ಭಗದತ್ತ, ಕರ್ಣ ಮುಂತಾದವರ ಅಸ್ತ್ರಶಸ್ತ್ರಗಳಿಂದ ಕೃಷ್ಣ ಕಾಪಾಡಿದ್ದಿದೆ; ಆದರೆ ಹಾಗೆ ಭೀಮಸೇನನಿಗೆ ಕೃಷ್ಣನ ಆ ರೀತಿಯ ನೆರವಿನ ಅವಶ್ಯಕತೆ ಇರಲಿಲ್ಲ.

## ಚಕ್ರವ್ಯೂಹಭೇದನ ಹಾಗೂ ಭೀಮಸೇನ

ಚಕ್ರವ್ಯೂಹಭೇದನಕಾರ್ಯದಲ್ಲಿ ಭೀಮನಿಗೆ ಸಾಮರ್ಥ್ಯವಿರಲಿಲ್ಲ ಎಂಬ ತಪ್ಪುಕಲ್ಪನೆ ಕೆಲವರಲ್ಲುಂಟು. ಆದರೆ ಕುರುಕ್ಷೇತ್ರ ಸಮರದ ಹದಿನಾಲ್ಕನೇ ದಿನ

ದ್ರೋಣರು ಜಯದ್ರಥನ ರಕ್ಷಣೆಗೆಂದು ನಿರ್ಮಿಸಿದ ವ್ಯೂಹ ಚಕ್ರವ್ಯೂಹಕ್ಕಿಂತ ಮಿಗಿಲಾದ ಶಕಟಾಬ್ಜ ಚಕ್ರವ್ಯೂಹ. ಅರ್ಜುನನಿಗೂ ಅಷ್ಟು ಸುಲಭವಾಗಿ ಸಾಧ್ಯವಾಗದಿದ್ದ ಅದರ ಭೇದನವನ್ನು ಭೀಮ ಲೀಲಾಜಾಲವಾಗಿ ಮಾಡಿದ ವಿವರ ಮಹಾಭಾರತದಲ್ಲಿದೆ. ಜಯದ್ರಥನ ವಧೆಗೆ ಅವನಿಂದ ಒದಗಿದ ಸಹಾಯದ ವಿವರವು ಮೂಲದಲ್ಲುಂಟು. ಅಂದು ಅಭಿಮನ್ಯುವಿನ ವಧೆ ಶ್ರೀಕೃಷ್ಣನ ಸಂಕಲ್ಪವೆಂಬುದನ್ನು ಅರಿತು ಅವನು ಭೇದಿಸಲಿಲ್ಲವೇ ಹೊರತು ಅಶಕ್ತಿಯಿಂದಲ್ಲ; ದ್ಯೂತಸಭೆಯಲ್ಲಿ ಕೌರವರನ್ನು ಕೊಲ್ಲದೆ ಹೇಗೆ ಸಹಿಸಿಕೊಂಡಿದ್ದನೋ ಹಾಗೆ. ಹದಿನಾಲ್ಕನೇ ದಿನದ ರಾತ್ರಿ ತನ್ನ ಮಗ ಘಟೋತ್ಕಚ ಹತನಾಗಬೇಕೆಂಬ ಕೃಷ್ಣಸಂಕಲ್ಪವನ್ನರಿತು ಆ ಮುಂಚೆ ಅಪರಾಹ್ಣದ ಯುದ್ಧದಲ್ಲಿ ಕರ್ಣನನ್ನು ಸೋಲಿಸಿ ಅವನ ರಥವನ್ನು ಏರಿದಾಗಲೂ ಅಲ್ಲಿದ್ದ ಶಕ್ತ್ಯಾಯುಧವನ್ನು ತರದೆ ಬಿಟ್ಟು ಬಂದಿದ್ದ ವಿವರವನ್ನು ಇಲ್ಲಿ ಗಮನಿಸಬಹುದು.

## ನಾರಾಯಣಾಸ್ತ್ರ ಪ್ರಸಂಗದಲ್ಲಿ ಭೀಮನ ಹಿರಿಮೆ

ಭೀಮಸೇನನ ಮೇಲೆ ಅಶ್ವತ್ಥಾಮಾಚಾರ್ಯರು ನಾರಾಯಣಾಸ್ತ್ರವನ್ನು ಪ್ರಯೋಗಿಸಿದಾಗ, '**ನಮಸ್ಕಾರ್ಯಮಪಿ ಹ್ಯಸ್ತ್ರಂ ನ ನಮ್ಯಂ ಜೀವನೇಚ್ಛಯಾ**' ಎಂದು ಮನಸ್ಸಿನಲ್ಲೇ ಆ ಅಸ್ತ್ರಕ್ಕೆ ಗೌರವ ಸಲ್ಲಿಸಿದನೇ ಹೊರತು, ಇತರರಂತೆ ಅದರಿಂದ ಪಾರಾಗುವುದಕ್ಕಾಗಿ ಶಸ್ತ್ರವನ್ನು ಕೆಳಗಿಡಲು ಸಿದ್ಧನಾಗಲಿಲ್ಲ. ಕೊನೆಗೆ ಶ್ರೀಕೃಷ್ಣನೇ ಬಂದು ಭೀಮಸೇನನನ್ನು ಎತ್ತಿ ರಥದಿಂದ ಕೆಳಗಿಡುವನು. ಅರ್ಜುನಾದಿಗಳನ್ನೂ ಎತ್ತಿದ್ದ ಭೀಮಸೇನನನ್ನೂ ಕೃಷ್ಣ ಎತ್ತಿದ ಎಂದರೆ ಇದರಿಂದ ಅವನ ಪಾರಮ್ಯವು ಸಿದ್ಧವಾಗುವುದು. ವಾಯುಕೂರ್ಮವನ್ನು ಧರಿಸಿರುವ ಪರಮಾತ್ಮನ ಪಾಲಿಗೆ ಇದೇನೂ ಆಶ್ಚರ್ಯವಲ್ಲ.

ಸ್ವಲ್ಪ ಹೊತ್ತು ನಾರಾಯಣಾಸ್ತ್ರ ಭೀಮಸೇನನ ಮೇಲೆ ಪ್ರಜ್ವಲಿಸುತ್ತಿತ್ತು. ಆದರೆ ಅದರಿಂದ ಅವನಿಗೆ ಯಾವ ಅಪಾಯವೂ ಆಗಲಿಲ್ಲ. ರೋಮವೂ ಕುಂದಲಿಲ್ಲ; '**ಅಗ್ನಾವಗ್ನಿರಿವ ಸ್ಥಿತಃ**' ಎಂದಿದೆ ಮಹಾಭಾರತ.

ಹನುಮಂತನ ಬಾಲಕ್ಕೆ ಬೆಂಕಿ ಹಚ್ಚಿದಾಗ, ಅವನ ಬಾಲದ ರೋಮವೂ ಹೇಗೆ ಸುಟ್ಟಿಲ್ಲವೋ ಹಾಗೆ. ಇದರಿಂದಲೂ ವಾಯುದೇವರ 'ಅಖಿಣಾಶ್ಮಸಮತ್ವ'ವು ಸ್ಪಷ್ಟವಾಗಬಲ್ಲದು.

## ಇಪ್ಪತ್ತೆರಡು ಬಾರಿ ಕರ್ಣನ ಸೋಲು.

ದ್ರೋಣಪರ್ವವನ್ನು ನೋಡಿದರೆ ಸ್ಪಷ್ಟವಾಗುವುದು: ಭೀಮಸೇನ ಇಪ್ಪತ್ತೆರಡು ಬಾರಿ ಕರ್ಣನನ್ನು ಸೋಲಿಸಿದ್ದನು; ಸೋಲಿಸಲಿರಲಿ ಕರ್ಣನನ್ನು

ಕೊಲ್ಲಲೂ ಸಹ ಸಂಪೂರ್ಣ ಸಮರ್ಥನಾಗಿದ್ದನು; ಆದರೂ ಹಾಗೆ ಮಾಡದಿರಲು ಕರ್ಣನನ್ನು ತಾನು ಕೊಲ್ಲುವೆನೆಂಬ ಅರ್ಜುನನ ಪ್ರತಿಜ್ಞೆ ಸುಳ್ಳಾಗಬಾರದು ಎಂಬುದೇ ಮುಖ್ಯಕಾರಣವಾಗಿತ್ತು ಎಂದು. ಪಂಪ ಕುಮಾರವ್ಯಾಸ ಮೊದಲಾದ ಯಾರೂ ಇಂತಹ ಮಹತ್ತ್ವದ ಸಂಗತಿಯನ್ನು ತಮ್ಮ ಕೃತಿಗಳಲ್ಲಿ ಉಲ್ಲೇಖಿಸಿಲ್ಲ. ಇದರಿಂದಾಗಿ ಸಂಸ್ಕೃತಬಾರದ ಮೂಲಮಹಾಭಾರತವನ್ನು ಓದದ, ಓದಲಾಗದ ಜನ ಭೀಮನ ನಿಜವಾದ ಹಿರಿಮೆಯನ್ನು ಅರಿಯುವುದರಿಂದ ವಂಚಿತರಾಗುವಂತಾಗಿದೆ. ಶ್ರೀಮಧ್ವಾಚಾರ್ಯರ ಮಹಾಭಾರತ ತಾತ್ಪರ್ಯನಿರ್ಣಯವೊಂದೇ ಎಲ್ಲ ಪ್ರಸಂಗಗಳಲ್ಲೂ ಈ ನಿಟ್ಟಿನಲ್ಲಿ ಬೆಳಕು ಚೆಲ್ಲಿರುವ ಕೃತಿ.

## ದುಃಶಾಸನನ ಸಂಹಾರ

ದುಃಶಾಸನನ ಎದೆಯನ್ನು ಬಗೆಯಲು ತೊಡಗಿದಾಗ ನಿರ್ಲಜ್ಜನಾದ ಅವನು ತನ್ನ ಕೈ ತೋರಿಸಿ, ಈ ಕೈಯಿಂದಲೇ ದ್ರೌಪದಿಯ ಸೆರಗನ್ನು ಎಳೆದದ್ದು ಎನ್ನುವನು. ಭೀಮಸೇನ ಆ ಕೈಯನ್ನು ಮುರಿದು ಬಿಸಾಡುವನು. ಅವನನ್ನು ಕೆಳಗೆ ಬೀಳಿಸಿದ ಭೀಮಸೇನ ತನ್ನ ಖಡ್ಗದಿಂದ ಅವನ ಎದೆಯನ್ನು ಬಗೆದು ಅವನ ರಕ್ತವನ್ನು ಹೀರುತ್ತ ನರಸಿಂಹನನ್ನು ಚಿಂತಿಸುವನು. **'ಸ್ಮರನ್ನೃಸಿಂಹಂ ಭಗವಂತಮೀಶ್ವರಂ ಸ ಮನ್ಯುಸೂಕ್ತಂ ಚ ದದರ್ಶ ಭಕ್ತ್ಯಾ'** ಅಂತಹಪ್ರಸಂಗದಲ್ಲೂ ಭಕ್ತಿಯಿಂದ ನರಸಿಂಹನನ್ನು ಸ್ಮರಿಸುತ್ತ ಭೀಮಸೇನ ಮನ್ಯುಸೂಕ್ತದ ದ್ರಷ್ಟಾರ ಮುನಿಯಾಗುವನು. ಎಂದರೆ ಭೀಮಸೇನ ಅಂತಹ ಘೋರಪ್ರಸಂಗದಲ್ಲೂ ಭಕ್ತ್ಯುದ್ರೇಕಕ್ಕೆ ಒಳಗಾಗಿದ್ದನೇ ಹೊರತು 'ಭಾವೋದ್ವೇಗಕ್ಕೆ' ಅಲ್ಲ. ದುಃಶಾಸನನ ಬಗ್ಗೆ ಅವನಿಗಿದ್ದುದು ತಾತ್ತ್ವಿಕದ್ವೇಷವೇ ಹೊರತು ವೈಯಕ್ತಿಕವಾದುದಲ್ಲ. ಆದುದರಿಂದ ಅವನು ಎಂದೂ ಭಾವೋದ್ವೇಗಕ್ಕೆ ಒಳಗಾಗಲೇ ಇಲ್ಲ. ನರಸಿಂಹ ಹಿರಣ್ಯಕಶಿಪುವನ್ನು ಎದೆ ಬಗೆದು ಸೀಳಿ ರಕ್ತದ ಓಕುಳಿ ಹರಿಸಿದ ಸನ್ನಿವೇಶವನ್ನು ಭೀಮಸೇನನ ದುಃಶಾಸನಸಂಹಾರದ ಕಾರ್ಯ ಹೋಲುತ್ತಿದ್ದಿತು. ಬಿಂಬದ ಕ್ರಿಯೆಗೆ ಅನುಗುಣವಾಗಿ ಪ್ರತಿಬಿಂಬದ ಕ್ರಿಯೆ ನಡೆದಿದೆಯಷ್ಟೇ. ಅಂದರೆ ಭೀಮ ಶ್ರೀಕೃಷ್ಣನ ಮುಖ್ಯ ಪ್ರತಿಬಿಂಬ. ಅದಕ್ಕೆಂದೇ ಈ ಹೋಲಿಕೆ ಪರಮ ಸಾರ್ಥಕ.

ಈ ಪ್ರಸಂಗದಲ್ಲಿ ಒಂದು ಸಂಶಯಕ್ಕೆ ಅವಕಾಶ ಉಂಟು; ಭೀಮಸೇನ ದುಃಶಾಸನನ ರಕ್ತ ಕುಡಿದದ್ದು ಸರಿಯೇ ? ಭೀಮಸೇನ ನಿಜಕ್ಕೂ ಅವನ ರಕ್ತವನ್ನು

ಕುಡಿದೇ ಇಲ್ಲ ಎಂಬುದು ಮೂಲಮಹಾಭಾರತವನ್ನು ನೋಡಿದರೆ ಸ್ಪಷ್ಟವಾಗುವುದು. ಮುಂದೆ ಗಾಂಧಾರಿ ಭೀಮಸೇನನಲ್ಲಿ ತನ್ನ ಮಗನ ಎದೆಯ ರಕ್ತವನ್ನು ಕುಡಿದದ್ದು ಸರಿಯೇ ? ಎಂದು ಪ್ರಶ್ನಿಸುವಳು. ಆಗ ಭೀಮಸೇನ ಹೇಳುವನು – ನಾನು ರಕ್ತವನ್ನು ಕುಡಿದೇ ಇಲ್ಲ; ಶತ್ರುಗಳಿಗೆ ಭೀತಿಯನ್ನುಂಟು ಮಾಡುವುದಕ್ಕಾಗಿ ಪರಸ್ತ್ರೀಕಾಮುಕರನ್ನು ಎಚ್ಚರಿಸುವುದಕ್ಕಾಗಿ ರಕ್ತಪಾನದ ನಟನೆಯನ್ನಷ್ಟೇ ಮಾಡಿದೆ. ಹಲ್ಲುಗಳ ಒಳಗೆ ರಕ್ತ ಪ್ರವೇಶಿಸದಂತೆ ಉಗುಳಿದ್ದೆ ಎಂದು; ಗಾಂಧಾರಿಗೆ ಸಮಾಧಾನವಾಗುವುದು. ಆದರೆ ಇದೆಲ್ಲ ಜನರಿಗೆ ಮನವರಿಕೆಯಾಗಿಲ್ಲ ಎಂದರೆ ಸರಿಯಾಗಿ ಅರ್ಥಮಾಡಿಕೊಂಡಿಲ್ಲ ಎಂದರ್ಥ.

ಭೀಮನು ದುಶಾಸನನನ್ನು ಹಾಗೆ ಉಗ್ರರೀತಿಯಲ್ಲಿ ಸಂಹರಿಸುವಾಗ ಆ ದೃಶ್ಯ ನೋಡಿ ಕರ್ಣನು ಮೂರ್ಛಿತನಾಗುವನು. ಅಶ್ವತ್ಥಾಮ ರಣರಂಗವನ್ನು ಬಿಟ್ಟು ತೆರಳಿಬಿಡುವನು. ದುರ್ಯೋಧನಾದಿಗಳೆಲ್ಲ ಹತಾಶರಾಗಿ ಗರಬಡಿದವರಂತೆ ನಿಲ್ಲುವರು. ಇಡೀ ರಣರಂಗದಲ್ಲಿ ಶೂನ್ಯದ ವಾತಾವರಣ ತುಂಬಿತ್ತು. ಅಷ್ಟೆಲ್ಲಾ ಸೊಕ್ಕಿನಿಂದ ಮೆರೆದಿದ್ದ ದುಃಶಾಸನ ಅನಾಥನಾಗಿ ಸತ್ತುಬೀಳುವನು.

ಈ ಸಮಯದಲ್ಲಿ ದ್ರೌಪದಿಯು ರಣರಂಗಕ್ಕೆ ಧಾವಿಸುವುದು, ಭೀಮಸೇನ ಅವಳ ತಲೆಗೂದಲುಗಳಿಗೆ ದುಃಶಾಸನನ ರಕ್ತವನ್ನು ಲೇಪಿಸಿ ಹಲ್ಲುಗಳಿಂದ ಬಾಚಿ ಮುಡಿಗಟ್ಟುವುದು ಮೊದಲಾದವುಗಳೆಲ್ಲ ಅನಂತರದ ಕವಿಗಳ ಕಲ್ಪನಾವಿಲಾಸವೇ ಹೊರತು ವಸ್ತುಸ್ಥಿತಿಯಲ್ಲ.

## ಕರ್ಣನ ವಧೆಗೆ ಭೀಮಸೇನನದೇ ಸ್ಫೂರ್ತಿ

ಕರ್ಣನನ್ನು ಕೊಂದಿದ್ದು ಅರ್ಜುನನಾದರೂ ಅದಕ್ಕೆ ಸ್ಫೂರ್ತಿ ನೀಡಿದ್ದು ಭೀಮಸೇನನೇ ಎಂದು ಮಹಾಭಾರತ ನಿರೂಪಿಸಿದೆ.

ಹಿಂದೊಮ್ಮೆ ಕರ್ಣ ಭೀಮಸೇನನನ್ನು 'ತೂಬರ' ಎಂದು ಕರೆದಿದ್ದ. 'ತೂಬರ' ಎಂದರೆ ಯೌವನ ಬಂದರೂ ಗಡ್ಡಮೀಸೆ ಇಲ್ಲದವನು. ಭೀಮಸೇನ ಪ್ರತಿಜ್ಞೆ ಮಾಡಿದ್ದ; **'ಹನ್ಯಾಂ ತೂಬರ ಇತ್ಯುಕ್ತೇ...'** ತನ್ನನ್ನು ಯಾರಾದರೂ 'ತೂಬರ' ಎಂದು ಕರೆದರೆ ಅವನನ್ನು ಕೊಂದುಹಾಕುವೆನೆಂದು. ಅವನ ಆ ಪ್ರತಿಜ್ಞೆಯನ್ನು ಮುರಿಯಬೇಕೆಂದೇ ಕರ್ಣ ದುರ್ಯೋಧನನಿಂದ ಪ್ರಚೋದಿತನಾಗಿ 'ತೂಬರ' ಎಂದು ಕರೆದಿದ್ದನೇ ಹೊರತು ಅವನಿಗೆ ಗಡ್ಡಮೀಸೆ ಇದ್ದಿಲ್ಲ ಎಂದರ್ಥವಲ್ಲ. **'ಸುವ್ಯಕ್ತಶ್ಮಶ್ರುಮಂಡಲಃ'**– ಎಂಬುದಾಗಿ ಶ್ರೀಮದಾಚಾರ್ಯರು ಭೀಮಸೇನನಿಗೆ

ಎದ್ದು ಕಾಣುವ ಮೀಸೆ ಇತ್ತೆಂದು ವರ್ಣಿಸುವರು. ಕರ್ಣ ಕೆರಳಿಸುವುದಕ್ಕಾಗಿ ಹೇಳಿದ 'ತೂಬರ' ಎಂಬ ಮಾತನ್ನು ಆಧಾರವಾಗಿಟ್ಟುಕೊಂಡು ಟಿ.ವಿ.ಯವರು ಭೀಮಸೇನನಿಗೆ ಮೀಸೆಯನ್ನೇ ತೆಗೆದುಹಾಕಿದ್ದಾರೆ. ಇದು ಒಂದು ಬಗೆಯ ಅತಿರೇಕವಾಗಿ ಕಂಡರೆ ರಾವಣಾದಿಗಳ ಮೀಸೆಯಂತೆ ಭಯಾನಕವಾದ ಮೀಸೆಯನ್ನು ಹಚ್ಚುವುದು ಮತ್ತೊಂದು ಅತಿರೇಕ. ಬಯಲಾಟಗಳಲ್ಲಿ ಭೀಮನನ್ನು ಕಂಡಕೂಡಲೇ ಮಕ್ಕಳೆಲ್ಲ ಹೆದರುವಂತೆ ಅವನಿಗೆ ಮೀಸೆ ಹಚ್ಚಿರುವುದುಂಟು. ಆದರೆ ಭೀಮಸೇನನಿಗೆ ಆಕರ್ಷಕವಾದ ಮೀಸೆ ಇದ್ದಿತೆಂದು ಶ್ರೀಮಧ್ವಾಚಾರ್ಯರು ಸ್ಪಷ್ಟಪಡಿಸಿದ್ದಾರೆ.

ಕರ್ಣ ಭೀಮನನ್ನು 'ತೂಬರ' ಎಂದು ಕರೆದಾಗಲೇ ಭೀಮ ಅವನನ್ನು ಕೊಲ್ಲಲು ಹೊರಟಿದ್ದ. ಆದರೆ ಅರ್ಜುನ ತನ್ನ ಪ್ರತಿಜ್ಞೆಗನುಗುಣವಾಗಿ ತಾನು ಕೊಲ್ಲುವೆನೆಂದು ಕೇಳಿಕೊಂಡಿದ್ದ. ಕೊನೆಗೆ ಭೀಮ **'ಅಹಂ ವೈನಂ ಗದಯಾ ಪೋಥಯಾಮಿ ತ್ವಂ ವಾ ಜಹೀಮಂ ಸಮುಪಾತ್ತವೀರ್ಯಃ'** ನೀನು ಕರ್ಣನನ್ನು ಕೊಲ್ಲದಿದ್ದರೆ ನಾನೇ ಕೊಂದು ಹಾಕುವೆನು – ಎಂದು ಸಾರಿದಾಗ ಅರ್ಜುನ ಕರ್ಣನನ್ನು ಕೊಲ್ಲಲು ಮುಂದುವರೆಯುವನು. ಹೀಗೆ ಕರ್ಣನ ಸಂಹಾರಕ್ಕೆ ಭೀಮನ ಪ್ರೇರಣೆ ಪ್ರಯೋಜಕವಾಯಿತು.

## ದುರ್ಯೋಧನನ ಸಂಹಾರ

ಗದೆಯಿಂದ ಹೊಡೆದು ದುರ್ಯೋಧನನ ಸಂಹಾರವನ್ನು ಭೀಮಸೇನ ನಡೆಸುವನು. ಭೀಮಸೇನ ದುರ್ಯೋಧನನ ತೊಡೆ ಮುರಿದದ್ದು ಸರಿಯೇ? ಎಂಬುದು ಕೆಲವರ ಆಕ್ಷೇಪ. ದುರ್ಯೋಧನ ದ್ರೌಪದಿಗೆ ತನ್ನ ತೊಡೆ ತೋರಿಸಿದ್ದಾಗಲೀ, ಕೃಷ್ಣನನ್ನು ಪಣಕ್ಕಿಡೆಂದು ಹೇಳಿದ್ದಾಗಲೀ ಸರಿಯೇ? ಎಂದು ಕೇಳುವ ಬದಲು ಅಂತಹ ಪಾಪಿಗೆ ಶಿಕ್ಷೆ ನೀಡುವಾಗ ಗದಾಯುದ್ಧದ ನಿಯಮವನ್ನು ಭೀಮಸೇನ ಉಲ್ಲಂಘಿಸಿದ್ದಾನೆ ಎಂದು ಆಕ್ಷೇಪಿಸುವುದು ಯಾವ ನ್ಯಾಯ? ಭೀಮಸೇನ ಸರಿಯಾಗಿಯೇ ಹೊಡೆದಿದ್ದಾನೆ. ಗಾಂಧಾರಿ ಈ ಬಗ್ಗೆ ಅವನನ್ನು ವಿಚಾರಿಸಿದಾಗ ಅವನು ಸ್ಪಷ್ಟೀಕರಿಸುವನು. ದುರ್ಯೋಧನ ಭೀಮನು ತನ್ನ ತೊಡೆಗೆ ಹೊಡೆಯುವುದು ಖಚಿತವಾದಾಗ ತಾನು ಸತ್ತರೂ ಭೀಮಸೇನನ ತೊಡೆ ಮುರಿಯುವ ಪ್ರತಿಜ್ಞೆ ಭಂಗವಾಗಬೇಕೆಂದು ತಲೆಕೆಳಗೆ, ಕಾಲುಮೇಲೆ ಮಾಡಿ ಪಲ್ಟಿ ಹೊಡೆಯುವನು. ಇದರಿಂದಾಗಿ ಅವನ ಬೆನ್ನಿನ ಮೂಲಕ್ಕೆ ಗದೆಯ ಏಟು ಬಿದ್ದು–

ಆದರಿಂದ ಅವನ ತೊಡೆಯೂ ಮುರಿಯುವುದು. ನಾಭಿಯ ಮೇಲೆಯೇ ಹೊಡೆದಂತೆಯೂ ಆಗುವುದು. ದುರ್ಯೋಧನ ಎಸಗಿದ ಮೋಸ ಭೀಮಸೇನನಿಗೆ ತನ್ನ ಪ್ರತಿಜ್ಞೆ ಈಡೇರಿಸಲೂ, ಗದಾಯುದ್ಧದ ನಿಯಮವನ್ನು ಪಾಲಿಸಲೂ ಅನುಕೂಲವೇ ಆಯಿತು.

ಈ ಬಗ್ಗೆ ಬಲರಾಮ ವಿಚಾರಿಸಿದಾಗಲೂ ಶ್ರೀಕೃಷ್ಣ:

**'ಅಧರ್ಮೋ ವಿದ್ಯತೇ ನಾತ್ರ, ಯದ್ ಭೀಮೋ ಹತವಾನ್ ರಿಪುಮ್'**

ಎಂದು ಘೋಷಿಸುವನು. ಕೃಷ್ಣನ ಘೋಷಣೆ ಎಂದರೆ ಅದು ಸುಪ್ರೀಮ್ ಕೋರ್ಟಿನ ಆದೇಶದಂತೆ. ಶ್ರೀಕೃಷ್ಣನನ್ನು ನಿರ್ದೋಷಿ ಎಂದು ವಾಯುದೇವರು ಸಮರ್ಥಿಸುವಂತೆ, ಶ್ರೀಕೃಷ್ಣ ಅಂತಹ ವಾಯುದೇವರ ಅವತಾರನಾದ ಭೀಮನಲ್ಲಿ ದೋಷಗಳಿಲ್ಲ ಎಂದು ಪ್ರಶಂಸಿಸಿರುವನು.

## ಭೀಮಸೇನನ ಧರ್ಮ ಪ್ರಜ್ಞೆ

ಭೀಮಸೇನನ ಧರ್ಮಪ್ರಜ್ಞೆಯ ಬಗ್ಗೆ ಅಪೂರ್ವ ಬೆಳಕು ಚೆಲ್ಲುವ ಒಂದು ಘಟನೆ ಹೀಗಿದೆ - ಪಾಂಡವರು ರಾಜ್ಯಭಾರ ನಡೆಸುತ್ತಿದ್ದ ಕಾಲ ಅದು. ಒಬ್ಬ ಬ್ರಾಹ್ಮಣ ರಾತ್ರಿಕಾಲದಲ್ಲಿ ಬಂದು ತನಗೆ ಯಜ್ಞ ಮಾಡಲು ಹಣ ಬೇಕೆಂದು ಧರ್ಮರಾಜನಲ್ಲಿ ಕೇಳಿಕೊಳ್ಳುವನು. ಯಜ್ಞದ ಆಚರಣೆ ಲೋಕಹಿತಕ್ಕಾಗಿ. ಆದುದರಿಂದ ಅಂತಹ ಯಜ್ಞ ನಿರ್ವಹಣೆಗೆ ರಾಜರಲ್ಲಿ ಸಹಾಯ ಕೇಳಬಹುದು. ಯುಧಿಷ್ಠಿರನಿಗೆ ಸಂತೋಷವಾಗುವುದು; ಆಗಲಿ ಕೊಡುವೆನು; ಆದರೆ ನಾಳೆ ಬೆಳಗ್ಗೆ ಕೊಡುವೆನು' ಎನ್ನುವನು. ಆ ಬ್ರಾಹ್ಮಣನಿಗೆ ಅವಸರ, ನಾಳೆ ಬೆಳಗ್ಗೆ ಹಣ ಪಡೆದುಕೊಂಡು, ಸಾಮಗ್ರಿ ತಂದು ಯಾವಾಗ ಯಜ್ಞ ಮಾಡುವುದು? ಎಂದು ಚಿಂತೆ. ಆದರೆ ರಾಜನ ಮಾತಿಗೆ ಎದುರು ಹೇಳುವಂತಿಲ್ಲ, ಆ ಬ್ರಾಹ್ಮಣ ನೇರವಾಗಿ ಯುವರಾಜನಾಗಿದ್ದ ಭೀಮಸೇನನಲ್ಲಿಗೆ ತೆರಳುವನು. ಆ ಕಾಲದಲ್ಲಿ ಮಧ್ಯರಾತ್ರಿಕಾಲದಲ್ಲಿಯೂ ರಾಜನನ್ನೂ ಯುವರಾಜನನ್ನೂ ಭೇಟಿಯಾಗಲು ಮುಕ್ತಾವಕಾಶ ಇತ್ತೆಂಬುದು ಗಮನಾರ್ಹ. ಭೀಮಸೇನ ಆ ಬ್ರಾಹ್ಮಣನ ಕೋರಿಕೆಯನ್ನು ಕೇಳುವನು. ರಾಜನು ಮರುದಿನ ಹಣ ಕೊಡಬೇಕೆಂದು ಕೊಟ್ಟಿರುವ ಅನುಮತಿಯನ್ನು ಮೀರುವುದು ಸರಿಯಲ್ಲ, ಹಾಗೆಯೇ ಬೇಡಿಬಂದವನನ್ನು ಬರಿಗೈಲಿ ಕಳುಹಿಸುವುದೂ ಸರಿಯಲ್ಲ, ಹೀಗೆಂದು ಯೋಚಿಸಿದ ಭೀಮಸೇನ ಕೂಡಲೇ ಆ ಬ್ರಾಹ್ಮಣನಿಗೆ ತನ್ನ ರತ್ನಖಚಿತವಾದ

ಹಸ್ತಾಭರಣವನ್ನು ಕೊಟ್ಟು ಕಳುಹಿಸುವನು. ಮತ್ತೆ ದೂತರನ್ನು ಕರೆದು ನಂದಿಘೋಷವನ್ನು ಮಾಡಲು ತಿಳಿಸುವನು. ಯುದ್ಧದಲ್ಲಿ ವಿಜಯೋತ್ಸವದ ಸಂದರ್ಭದಲ್ಲಿ ಬಾರಿಸಲಾಗುವ 'ನಂದಿಘೋಷ'ದ ಸದ್ದನ್ನು ಕೇಳಿ ಯುಧಿಷ್ಠಿರನಿಗೆ ಕುತೂಹಲ. ಭೀಮಸೇನ ಏನನ್ನು ಮಾಡಿದರೂ ಅದು ತುಂಬಾ ಅರ್ಥಗರ್ಭಿತವಾಗಿರುವುದೆಂಬುದನ್ನು ಚೆನ್ನಾಗಿ ಮನವರಿಕೆ ಮಾಡಿಕೊಂಡಿದ್ದ ಯುಧಿಷ್ಠಿರ ಭೀಮಸೇನನ ಅಭಿಪ್ರಾಯವನ್ನು ತಿಳಿದುಕೊಂಡು ಬರಲು ಒಬ್ಬ ದೂತರನ್ನಲ್ಲ; ಮತ್ತೆ ಮತ್ತೆ ಅನೇಕ ದೂತರನ್ನು ಕಳುಹಿಸಿಕೊಡುವನು.

ಭೀಮಸೇನ ತಿಳಿಸುವನು– ಯುಧಿಷ್ಠಿರ ಆ ಬ್ರಾಹ್ಮಣನಿಗೆ ನಾಳೆ ಹಣ ಕೊಡುವೆನೆಂದು ತಿಳಿಸಿದನು. ಅಂದರೆ ನಾಳೆಯವರೆಗೆ ತಾನು ಬದುಕುವೆನೆಂದೂ ಆ ಹಣ ಪಡೆದುಕೊಳ್ಳಬೇಕಾದ ವ್ಯಕ್ತಿ ಬದುಕಿ ಉಳಿಯುವವನೆಂದೂ, ಅವನ ಯಜ್ಞ ಮಾಡಬೇಕೆಂಬ ಬುದ್ಧಿ ಸ್ಥಿರವಾಗಿರುವುದೆಂದೂ ನಿರ್ಧರಿಸಿಕೊಂಡಂತಾಯಿತು. ಇದು ತುಂಬಾ ಸಂತೋಷದ ಸಂಗತಿ. ಎಂದರೆ ಇದು ನಮ್ಮಣ್ಣ ಮೃತ್ಯುವಿನ ಮೇಲೆ ಸಾಧಿಸಿದ ವಿಜಯ ಎಂದಾಯಿತು. ಅದಕ್ಕಾಗಿ ನಂದಿಘೋಷ ಮಾಡಲ್ಪಟ್ಟಿತು – ಎಂಬುದಾಗಿ. ಯುಧಿಷ್ಠಿರನಿಗೆ ಭೀಮಸೇನನ ಆಂತರ್ಯ ತಿಳಿಯಿತು. ಮುಂದೆಂದೂ ಅವನು ಅಂತಹ ತಪ್ಪು ತನ್ನಿಂದಾಗದಂತೆ ಎಚ್ಚರವಹಿಸಿದನು.

**'ಗೃಹೀತ ಇವ ಕೇಶೇಷು ಮೃತ್ಯುನಾ ಧರ್ಮಮಾಚರೇತ್'** ಎಂದಿರುವಂತೆ ತನಗೆ ಈಗಲೇ ಮೃತ್ಯುವು ಸನ್ನಿಹಿತವಾಗಿದೆ ಎಂದು ಭಾವಿಸಿ ಸಾಧಕ ಧರ್ಮಾಚರಣೆಯಲ್ಲಿ ತೊಡಗಬೇಕು. ಮರ್ತ್ಯದೇಹ **ಸರ್ವತೋಮೃತ್ಯು** ಎಂದು ಭಾಗವತದಲ್ಲಿ ಪರಿಗಣಿಸಲ್ಪಟ್ಟಿದೆ. ಮೃತ್ಯುವಿಗೆ ದೇಶಕಾಲಗಳಿಲ್ಲ, ಹೊತ್ತುಗೊತ್ತುಗಳಿಲ್ಲ ಎಂದರೆ ಸಾವು ಯಾವಾಗ ಬೇಕಾದರೂ ಸಂಭವಿಸಬಹುದು. ಸದಾ ಈ ಎಚ್ಚರಿಕೆಯನ್ನು ಇಟ್ಟುಕೊಂಡು ಧರ್ಮಕಾರ್ಯವನ್ನು ಆದಷ್ಟು ಬೇಗ ಮುಗಿಸಿ ಬಿಡಬೇಕು. ಯಾವ ಕಾರಣಕ್ಕೂ ಮುಂದೆ ಹಾಕಬಾರದು. ಹೀಗೆ **'ತ್ವರೇತ ಧರ್ಮಾರ್ಥಂ..'** ಧರ್ಮಾಚರಣೆಯಲ್ಲಿ ವಿಳಂಬ ಸಲ್ಲ ಎಂಬ ಧಾರ್ಮಿಕ ಸಂದೇಶವನ್ನು ಭೀಮಸೇನ ಪರಿಣಾಮಕಾರಿಯಾಗಿ ಬೋಧಿಸಿ, ಧರ್ಮರಾಜನೂ ಆ ನಿಟ್ಟಿನ ಎಚ್ಚರಿಕೆಯನ್ನು ಪಡೆದುಕೊಳ್ಳುವಂತೆ ಪ್ರೇರೇಪಿಸಿದನು. ಧರ್ಮಮೂರ್ತಿಯಾದ ಧರ್ಮರಾಜನಿಗೇ ಧರ್ಮಪ್ರಜ್ಞೆಯನ್ನು ಬೋಧಿಸಿದ ಶುದ್ಧಭಾಗವತಧರ್ಮರತ ಭೀಮಸೇನ ಎನ್ನುವುದು ಇಲ್ಲಿಯ ಭಾವ. ಇದು ಜಗತ್ತಿಗೇ ನೀಡಿದ ಉಪದೇಶವೂ ಆಗಿದೆ. **'ಭೀಮಸೇನಸಮೋ ನಾಸ್ತಿ'** ಎಂಬ ಮಾತು ಈ ಅರ್ಥದಲ್ಲೂ ಸಾರ್ಥಕ.

## ಮಹಾಭಾರತದ ರಾಮ

ರಾಮಾಯಣದಲ್ಲಿ ರಾಮನ ಪಾತ್ರವಿದ್ದಂತೆ ಮಹಾಭಾರತದಲ್ಲಿ ಭೀಮಸೇನನ ಪಾತ್ರ. ಪಿತೃವಾಕ್ಯಪರಿಪಾಲನೆಗಾಗಿ ವನವಾಸ, ಭ್ರಾತೃವಾತ್ಸಲ್ಯ, ತನ್ನ ಪತ್ನಿ ಸೀತೆಯನ್ನು ಕೆಣಕಿದ ರಾವಣಾದಿ ಖಳನಾಯಕರ ಸಂಹಾರ ಶ್ರೀರಾಮನ ವೈಶಿಷ್ಟ್ಯವಾಗಿರುವಂತೆ ಭ್ರಾತೃವಾಕ್ಯಪರಿಪಾಲನೆಗಾಗಿ ವನವಾಸ, ಸೋದರವಾತ್ಸಲ್ಯ, ತನ್ನ ಪತ್ನಿ ದ್ರೌಪದಿಯನ್ನು ಕೆಣಕಿದ ದುರ್ಯೋಧನಾದಿ ಖಳನಾಯಕರ ಸಂಹಾರಗಳು ಭೀಮನ ವೈಶಿಷ್ಟ್ಯಗಳಾಗಿವೆ ಎಂದರೆ ಶ್ರೀರಾಮ ರಾಮಾಯಣದ ಕೇಂದ್ರಬಿಂದುವಾಗಿರುವಂತೆ ಭೀಮಸೇನ ಮಹಾಭಾರತದ ಕೇಂದ್ರಬಿಂದು-ವಾಗಿರುವನು. ಅಲ್ಲಿ ಶ್ರೀರಾಮ ಮಹಾರಾಜನಾಗಿದ್ದರೆ ಇಲ್ಲಿ ಶ್ರೀಭೀಮ ಯುವರಾಜನಾಗಿರುವನು. ಅದು ರಾಮಕಥೆಯಾದರೆ ಇದು ಭೀಮಕಥೆ. ಅಲ್ಲಿಯ ರಾಮ ಸರ್ವೋತ್ತಮನಾದ ಭಗವಂತನಾದರೆ ಇಲ್ಲಿಯ ಭೀಮ ಅಲ್ಲಿ ಹನುಮಂತನಾಗಿ ಸೇವೆಸಲ್ಲಿಸಿದ ಜೀವೋತ್ತಮನಾದ ವಾಯುದೇವನೇ ಆಗಿರುವನು. ಅಲ್ಲಿ ಶ್ರೀರಾಮದೂತನಾದರೆ, ಇಲ್ಲಿ ಶ್ರೀಕೃಷ್ಣದೂತನಾಗಿ ಶ್ರೀರಾಮನನ್ನೂ ಅನುಕರಿಸಿರುವನು. ಶ್ರೀರಾಮ ಬಿಂಬನಾದರೆ ಭೀಮ ಅವನ ಸಾಕ್ಷಾತ್ ಪ್ರತಿಬಿಂಬ. ಸ್ವತಃ ಶ್ರೀರಾಮನೇ ಆದ ಶ್ರೀಕೃಷ್ಣನ ಅನುಪಮ ಭಕ್ತನಾಗಿ ಭೀಮನೇರಿರುವ ಮಟ್ಟಕ್ಕೆ ಅರ್ಜುನಾದಿ ಇತರ ಯಾರೂ ಮುಟ್ಟುವುದಿಲ್ಲ. – **'ಭೀಮಸೇನಸಮೋ ನಾಸ್ತಿ'**

> **ಕಾಮೀ ಯೇನ ಹಿ ಕೀಚಕೋ ವಿನಿಹತಃ ಕ್ರೋಧೀ ಚ ದುಃಶಾಸನಃ**
> **ಸ್ತಬ್ಧೋ ಲುಬ್ಧಸುಯೋಧನಶ್ಚ ಮಣಿಮಾನ್ಮುಗ್ಧೋ ಮದಾಂಧೋ ಬಕಃ ।**
> **ಕೃಷ್ಣೇರ್ಷ್ಯಾಭಿರತಶ್ಚ ಮಾಗಧಪತಿಃ ಷಡ್ವೈರಿವರ್ಗಾತ್ ಸದಾ**
> **ಸ ತ್ವಂ ಭೀಮ ಗುಣಾಭಿರಾಮ ದಯಯಾ ದಾಸಂ ಹಿ ಮಾಮುದ್ಧರ ॥**
> **ದಾಹಾದ್ಯೇನ ವಿಮೋಚಿತೋ ನಿಜಜನಃ ಸ ತ್ವಂ ಭವಾಗ್ನೇರವ**
> **ಸ್ವೀಯಾಧ್ವಪ್ರತಿಬಂಧಕಶ್ಚ ನಿಹತಃ ಕಿರ್ಮೀರನಾಮಾ ಸ ಮೇ ।**
> **ಪ್ರೋದ್ಯನ್ಮಧ್ವಮತಾಧ್ವಗಸ್ಯ ಸದಯ ಪ್ರತ್ಯರ್ಥಿನಃ ಸಾದಯ**
> **ಸ್ವಾಮಿನ್ ಸೋಮಕುಲಾಗ್ರಗಣ್ಯ ಭವತಃ ಪೋತಂ ಹಿ ಮಾಂ ನ ತ್ಯಜ ॥**

**-(ಮಧ್ವಾಷ್ಟಕ)**

ಎಂಬುದಾಗಿ ಶ್ರೀವಾದಿರಾಜಶ್ರೀಚರಣರು ನೀಡಿರುವ ಭೀಮಸೇನನ ಚಿತ್ರ ಆತನ ಹಿರಿಮೆ ಗರಿಮೆಗಳ ಸಾರಸರ್ವಸ್ವವಾಗಿದೆ.

**॥ ಶ್ರೀಕೃಷ್ಣಾರ್ಪಣಮಸ್ತು ॥**

**ಸಮರ್ಪಿತಂ ಮಯಾ ಭವೇತ್ ಸುಮಧ್ವನುತ್ತವಾಣಿನಾ।**
**ರಮಾರಮೇಶಪಾದಯೋಃ ಪ್ರಭಂಜನಾಭಿಧಾಯುಜಾ ॥**

## ಪರಿಶಿಷ್ಟ

# ಮನನೀಯ ಮಾತುಗಳು

[ಡಾ॥ ವ್ಯಾಸನಕೆರೆ ಪ್ರಭಂಜನಾಚಾರ್ಯರು ನೀಡಿದ ಭೀಮಸೇನನ ಕುರಿತಾದ ಪ್ರವಚನದಲ್ಲಿ ಪ್ರಾಸಂಗಿಕವಾಗಿ ಪ್ರಸ್ತಾಪಿಸಲ್ಪಟ್ಟ ಕೆಲವು ಮನನೀಯ ಮಾತುಗಳ ಸಂಗ್ರಹ ]

### ಪಾಚಕರು

ಅಡುಗೆಯವರು ತಮ್ಮ ಮನೆಯಿಂದ ಯಾವ ವಸ್ತುವನ್ನೂ ತರುವುದಿಲ್ಲ. ಆಗಾಗಲೇ ತರಿಸಿಟ್ಟ ವಸ್ತುಗಳನ್ನೇ ಉಚಿತರೀತಿಯಲ್ಲಿ ಬಳಸಿ ರುಚಿಕರವಾದ ಅಡಿಗೆಯನ್ನು ತಯಾರಿಸುತ್ತಾರೆ. ಭೀಮಸೇನನಾಗಿದ್ದಾಗ ವಿರಾಟನಗರದಲ್ಲಿ ಪಾಚಕನಾಗಿದ್ದ ಶ್ರೀಮಧ್ವಾಚಾರ್ಯರೂ ಮಾಡಿದ ಕೆಲಸ ಇಂತಹುದ್ದೇ. ಶ್ರುತಿ ಸ್ಮೃತಿಗಳಲ್ಲಿ ಪ್ರಸ್ತುತವಾದ ಶ್ರೀವೇದವ್ಯಾಸನಿರೂಪಿತ ಪ್ರಮೇಯಗಳನ್ನೇ ತಮ್ಮ ಸರ್ವಮೂಲಗ್ರಂಥಗಳ ಮೂಲಕ ಪ್ರಚುರ ಪಡಿಸಿರುವರೇ ಹೊರತು ಹೊಸದಾಗಿ ಯಾವ ಪ್ರಮೇಯವನ್ನೂ, ತತ್ತ್ವವನ್ನೂ ಅವರು ಕಲ್ಪಿಸಿ ನಿರೂಪಿಸಿಲ್ಲ.

### ಉತ್ತಮ ಸಂಗ್ರಹ

ಕ್ಷೇಮೇಂದ್ರ ಎನ್ನುವವನು ಮಹಾಭಾರತಕಥೆಯನ್ನು ಸಂಗ್ರಹ ರೂಪದಲ್ಲಿ 'ಭಾರತಮಂಜರೀ', ರಾಮಾಯಣಕಥೆಯನ್ನು ಸಂಗ್ರಹ ರೂಪದಲ್ಲಿ 'ರಾಮಾಯಣಮಂಜರೀ' ಎಂದೂ ಬರೆದಿರುವನು. ಗಾತ್ರದಲ್ಲಿ ಶ್ರೀಮಧ್ವರ ಮಹಾಭಾರತತಾತ್ಪರ್ಯನಿರ್ಣಯಕ್ಕಿಂತ ಎರಡು ಮೂರು ಪಟ್ಟು ದೊಡ್ಡದಾದ ಗ್ರಂಥಗಳು ಅವು. ಆದರೂ ಎಷ್ಟೆಷ್ಟೋ ಪ್ರಮುಖ ಘಟ್ಟಗಳೇ ಅವುಗಳಲ್ಲಿ ಬಿಟ್ಟುಹೋಗಿವೆ. ಆದರೆ ಶ್ರೀಮದಾಚಾರ್ಯರು ತಾತ್ತ್ವಿಕದೃಷ್ಟಿಯಿಂದ, ಸಾಧನೆಯದೃಷ್ಟಿಯಿಂದ ಪ್ರಮುಖಗಳಾದ ಚಿಕ್ಕಪುಟ್ಟ ವಿಚಾರಗಳನ್ನೂ ಬಿಡದಂತೆ ರಾಮಾಯಣ, ಮಹಾಭಾರತ ಕಥೆಗಳನ್ನು ತುಂಬ ಜಾಣ್ಮೆಯಿಂದ ಸಮಗ್ರವಾಗಿ ಸಂಗ್ರಹಿಸಿರುವರು. ತಾತ್ಪರ್ಯನಿರ್ಣಯದಲ್ಲಿನ ಸಂಶೋಧನ ಹಾಗೂ ನಿರ್ಣಾಯಕ ದೃಷ್ಟಿಕೋಣ, ಪಾತ್ರವಿಶ್ಲೇಷಣೆ, ವಿಮರ್ಶನ ದೃಷ್ಟಿ ಕ್ಷೇಮೇಂದ್ರನ ಕೃತಿಗಳಲ್ಲಿ ಇಲ್ಲವೇ ಇಲ್ಲ.

### ವಾಯುದೇವ ಒಂದು ಕೋಮಿನ ದೇವತೆಯಲ್ಲ

ಶ್ರೀಜಗನ್ನಾಥದಾಸರು ತಮ್ಮ ಹರಿಕಥಾಮೃತಸಾರದಲ್ಲಿ :

**ಆರುಮೂರೆರಡೊಂದು ಸಾವಿರ ಮೂರೆರಡು ಶತ ಶ್ವಾಸಜಪಗಳ**
**ಮೂರುವಿಧಜೀವರೊಳಗಬ್ಜಜಕಲ್ಪಪರ್ಯಂತ।**
**ತಾ ರಚಿಸಿ ಸತ್ವರಿಗೆ ಸುಖ ಸಂಸಾರ ಮಿಶ್ರರಿಗಧಮಜನರಿಗ-**
**ಪಾರದುಃಖಗಳೀವ ಗುರು ಪವಮಾನ ಸಲಹೆಮ್ಮ ॥**

ಎಂದು ತಿಳಿಸಿರುವಂತೆ, ವಾಯುದೇವರು ಪ್ರತಿಯೊಬ್ಬ ಜೀವನ ಉಸಿರಾಟಾದಿಗಳನ್ನು ನಡೆಸುತ್ತ ಎಲ್ಲರಿಗೂ ಪೂಜ್ಯರಾದವರು. 'ಪ್ರಾಣಿ'

ಎಂದಾಗಬೇಕಾದರೆ ಪ್ರಾಣ ಇರಬೇಕು. ಪ್ರಾಣ ಇರಲೇಬೇಕಾದರೆ ಪ್ರಾಣದೇವನ ಅನುಗ್ರಹ ಬೇಕೇ ಬೇಕು. ಆದ್ದರಿಂದ ಶ್ರೀವಾಯುದೇವರನ್ನು ಯಾವುದೋ ಒಂದು ಕೋಮಿನ, ಒಂದು ಪಂಗಡದ ದೇವತೆ ಎಂದು ಭಾವಿಸಬಾರದು; ಅವರು ಸಾರ್ವಜನಿಕ ದೇವತೆ.

## ಆಚಮನ– ಪ್ರಾಣಾಯಾಮ

ಯಾವುದೇ ಶಾಸ್ತ್ರೀಯಕರ್ಮಾನುಷ್ಠಾನದ ಪ್ರಸಂಗದಲ್ಲಿ ಪ್ರಾರಂಭದಲ್ಲಿ 'ಆಚಮ್ಯ' 'ಪ್ರಾಣಾನಾಯಮ್ಯ' ಎಂಬುದಾಗಿ ಆಚಮನ ಮತ್ತು ಪ್ರಾಣಾಯಾಮಗಳು ವಿಧಿಸಲ್ಪಟ್ಟಿವೆ. 'ಕೇಶವಾಯ ಸ್ವಾಹಾ, ನಾರಾಯಣಾಯ ಸ್ವಾಹಾ......' ಎಂದು ಪ್ರಾರಂಭವಾಗುವ ಆಚಮನ ವಿಷ್ಣುಸರ್ವೋತ್ತಮತ್ವವನ್ನು ಸಾರುತ್ತಿದ್ದರೆ, ಪ್ರಾಣಾಯಾಮ ಉಸಿರಾಟದ ದೇವತೆಯಾದ ವಾಯುವಿನ ಜೀವೋತ್ತಮತ್ವವನ್ನು ಸೂಚ್ಯವಾಗಿ ತಿಳಿಸುತ್ತಿದೆ. ಅಂತೂ ಆಚಮನ ಹಾಗೂ ಪ್ರಾಣಾಯಾಮಗಳನ್ನು ಮಾಡುವವರೆಲ್ಲ ವಿಷ್ಣುಸರ್ವೋತ್ತಮತ್ವ, ವಾಯುಜೀವೋತ್ತಮತ್ವವನ್ನೂ ಒಪ್ಪಿಕೊಂಡಂತೆಯೇ! ಇವೆರಡರ ಅನುಸಂಧಾನವಿಲ್ಲದ ಯಾವುದೇ ಕರ್ಮಾನುಷ್ಠಾನ ನಿರರ್ಥಕ ಎಂಬ ತತ್ತ್ವವೂ ಇವುಗಳಿಂದ ಸೂಚಿತ.

## ಮಧ್ವರು ಸ್ತ್ರೀಪರವಾದಿಗಳು

ಅನೇಕ ಮತಾಚಾರ್ಯರು ಸ್ತ್ರೀಯರಿಗೆ ಮೋಕ್ಷವೇ ಇಲ್ಲ ಎಂದು ವಾದಿಸುವವರು. ಆದರೆ ಅವರ ಆ ವಾದವನ್ನು ಹೆಚ್ಚಾಗಿ ಗಮನಿಸದೆಯೇ ಅವರ ಮತವನ್ನು ಅನೇಕರು ಅವಲಂಬಿಸುತ್ತಿರುವರು. ಶ್ರೀಮಧ್ವಾಚಾರ್ಯರಷ್ಟು ಸ್ತ್ರೀಪರ ವೈದಿಕಮತಾಚಾರ್ಯರು ಮತ್ತೊಬ್ಬರಿಲ್ಲ. ಅವರು ಶಾಸ್ತ್ರದಲ್ಲಿ ನಿರೂಪಿತವಾದ ಸ್ತ್ರೀಯರ ಸ್ಥಾನಮಾನಗಳನ್ನು ಚೆನ್ನಾಗಿ ಗುರುತಿಸಿಕೊಟ್ಟಿರುವರು. ಸ್ತ್ರೀಯರಿಗೂ ಮೋಕ್ಷ ಇದ್ದೇ ಇದೆ ಎಂದು ಉಪಪಾದಿಸುವ ಅವರು ತತ್ತ್ವಜ್ಞಾನ ಹಾಗೂ ಮೋಕ್ಷಗಳ ಸಾಧನೆಗಾಗಿ ಸ್ತ್ರೀಯರು ಹೇಗೆ ನಡೆದುಕೊಳ್ಳಬೇಕೆಂಬುದನ್ನೂ ತೋರಿಸಿರುವರು. ಮಹಾಭಾರತದಲ್ಲಿ ಏಕಚಕ್ರನಗರದ ಬ್ರಾಹ್ಮಣನ ಮನೆಯಲ್ಲಿ ನಡೆದ ಕೌಟುಂಬಿಕಚರ್ಚೆಗೆ ಸಂಬಂಧಿಸಿದಂತೆ **'ಕನ್ಯೋದಿತಾ ಬಲ ಕುಲದ್ವಯ ತಾರಿಣೀತಿ...'** ಎಂಬುದಾಗಿ ಪುತ್ರ ತಾನು ಹುಟ್ಟಿದ ಕುಲವನ್ನಷ್ಟೇ ಉದ್ಧಾರ ಮಾಡುವುದಾದರೆ, ಕನ್ಯೆಯು ತನ್ನ ತಂದೆಯ ಹಾಗೂ ಗಂಡನ ಹೀಗೆ ಎರಡೂ ಕುಲಗಳ ಉದ್ಧಾರ ಮಾಡುವಳೆಂದು ಕನ್ಯೆಯ ಮಹತ್ತ್ವವನ್ನು ಎತ್ತಿ ಸಾರಿರುವರು.

## ಪತ್ನಿಯು ಗುಲಾಮಳಲ್ಲ – ಗೆಳತಿ

ಶಾಸ್ತ್ರಗಳಲ್ಲಿ ಸ್ತ್ರೀಯರ ಶೋಷಣೆ ನಡೆದಿದೆ ಎಂದು ಬೊಬ್ಬೆಹೊಡೆಯುವವರು ಮಹಾಭಾರತ, ರಾಮಾಯಣಾದಿಗಳಲ್ಲಿ ಸ್ತ್ರೀಯರನ್ನು ಹೇಗೆ ಪರಿಗಣಿಸಲಾಗಿದೆ ಎಂಬುದನ್ನು ಕಣ್ಣು ತೆರದು ನೋಡಬೇಕು. ಅಂತಹವರು ಆರೋಪಿಸುವಂತೆ ಸ್ತ್ರೀಯರನ್ನು ಗುಲಾಮರಂತೆ ಖಂಡಿತ ನೋಡಲಾಗಿಲ್ಲ, ಏಕಚಕ್ರನಗರದಲ್ಲಿ ಪಾಂಡವರಿಗೆ ಆಶ್ರಯ ಕೊಟ್ಟ ಬ್ರಾಹ್ಮಣ **'ಸಖಾಯಂ ವಿಹಿತಾಂ ದೇವೈರ್ನಿತ್ಯಂ ಪರಮಿಕಾಂ ಗತಿಮ್'**, **'ಜಾಯಾ ಸಖೇತಿ'** – ಎಂಬುದಾಗಿ ಪತ್ನಿ ದೈವಕಲ್ಪಿಸಿರುವ ಆಪ್ತಗೆಳತಿ ಎಂದು ತಿಳಿಸುವನು. ಯಕ್ಷಪ್ರಶ್ನೆಗಳಲ್ಲಿ ಒಂದು **'ಕಿಂಸ್ವಿನ್ಮಿತ್ರಂ**

**ಗೃಹೇ ಸತಃ?** ಮನೆಯಲ್ಲಿ ಮಿತ್ರ ಯಾರು? ಇದಕ್ಕೆ ಯುಧಿಷ್ಠಿರನ ಉತ್ತರ–**'ಭಾರ್ಯಾ ಮಿತ್ರಂ ಗೃಹೇ ಸತಃ'** ಪತ್ನಿಯೇ ಅಂತಹ ಸಂಗಾತಿ. ಹೀಗೆ ಮಹಾಭಾರತ ಪತ್ನಿಯನ್ನು ಜೀವನ ಸಂಗಾತಿಯನ್ನಾಗಿಯೇ ಗುರುತಿಸಿಕೊಟ್ಟಿದೆ.

## ಭಾಷಾಜ್ಞಾನದ ಜೊತೆಗೆ ಭಾವಪರಿಜ್ಞಾನವೂ ಬೇಕು

ಮಹಾಭಾರತ ರಾಮಾಯಣ ಮುಂತಾದವು ಬರೇ ಕಥೆಗಳಲ್ಲ; ಅವು ತಾತ್ತ್ವಿಕ ಗ್ರಂಥಗಳು. ಶಾಸ್ತ್ರಗಳು, ಇಂತಹವುಗಳನ್ನು ಅರ್ಥೈಸಿಕೊಳ್ಳಬೇಕಾದರೆ ಬರೀ ಸಂಸ್ಕೃತಭಾಷಾಜ್ಞಾನವಿದ್ದರೆ ಸಾಲದು; ಶಾಸ್ತ್ರಜ್ಞಾನವೂ ಬೇಕು. ಶಾಸ್ತ್ರೀಯ ಪರಿಭಾಷೆಯನ್ನು ತಿಳಿದವನಷ್ಟೇ ಅಂತಹ ಗ್ರಂಥಗಳನ್ನು ಸರಿಯಾಗಿ ಅರ್ಥೈಸಿಕೊಳ್ಳಬಲ್ಲ. ವೈದ್ಯಕೀಯ ಗ್ರಂಥವೊಂದನ್ನು ಅರ್ಥೈಸಿಕೊಳ್ಳಬೇಕಾದರೆ ಭಾಷಾಜ್ಞಾನದೊಂದಿಗೆ ವೈದ್ಯಕೀಯ ಪರಿಭಾಷೆಯ ತಿಳುವಳಿಕೆಯೂ ಬೇಕು ತಾನೇ? ಹಾಗೆಯೇ ಶಾಸ್ತ್ರೀಯ ಪರಿಭಾಷೆಯನ್ನು ಬಲ್ಲವರಿಗಷ್ಟೇ ಮಹಾಭಾರತಾದಿ ಶಾಸ್ತ್ರೀಯಗ್ರಂಥಗಳು ನಿಜವಾದ ಅರ್ಥದಲ್ಲಿ ತೆರೆದುಕೊಳ್ಳಬಲ್ಲವು.

## ಆಧುನಿಕ ವಿಜ್ಞಾನಿಗಳೂ ಭಗವಂತನೂ

ಆಧುನಿಕ ವಿಜ್ಞಾನಿಗಳು ಏನನ್ನಾದರೂ ಸಂಶೋಧನೆ ಮಾಡಿದರೆ ಅದನ್ನು ಮೊದಲು ಯಾವುದೋ ಇಲಿ ಮುಂತಾದ ಬಡಪಶುಗಳ ಮೇಲೆ ಪ್ರಯೋಗ ಮಾಡುವುದುಂಟು. ಮನುಷ್ಯರ ಮೇಲೆ ಅಥವಾ ತಮ್ಮ ಮಕ್ಕಳ ಮೇಲೆ ಎಂದೂ ಪ್ರಯೋಗಿಸಲಾರರು. ಏಕೆಂದರೆ ಅವರಿಗೆ ಅದರಲ್ಲಿ ಖಚಿತತೆ ಇರುವುದಿಲ್ಲ. ಆದರೆ ಭಗವಂತ ಕಾಲಕೂಟವಿಷವನ್ನು ಪಾನಮಾಡಲು ತನ್ನ ಪ್ರಿಯಪುತ್ರನಾದ ವಾಯುದೇವನಿಗೇ ನೀಡುವನು. ಅದಕ್ಕೆ ಏನನ್ನೂ ಸಂಪೂರ್ಣ ಜೀರ್ಣಿಸಿಕೊಳ್ಳಬಲ್ಲ ವಾಯುದೇವರ ಸಾಮರ್ಥ್ಯದ ಬಗೆಗಿನ ಸಂಪೂರ್ಣ ಪರಿಜ್ಞಾನವೇ ಕಾರಣ.

## ಬರಿಗೈಯಿಂದ ಸಂಹಾರ

ನಮ್ಮ ಜನಕ್ಕೆ ಇಡ್ಲಿ, ದೋಸೆ ತಿನ್ನಬೇಕಾದರೂ ಎರಡೆರಡು ಚಮಚ(ಸ್ಪೂನು)ಗಳು ಬೇಕಾಗುತ್ತವೆ. ಬರೀ ಕೈಯಿಂದ ತಿನ್ನುವ ಸ್ಥಿತಿಯಲ್ಲಿ ಅವರಿಂದು ಇಲ್ಲ. ಆದರೆ ಭೀಮಸೇನ ಹಿಡಿಂಬ, ಬಕ ಮೊದಲಾದ ಶಿವಾದಿದೇವತೆಗಳ ವರಗಳಿಂದ ಕೂಡಿದ ಮಹಾರಾಕ್ಷಸರನ್ನೂ ಬರೀ ಕೈಯಿಂದಲೇ ಸಂಹರಿಸದ ಮಹಾಶೂರ ಎಂಬುದು ಎಷ್ಟು ಆಶ್ಚರ್ಯಕರ !

## ಅಭಿನವ ವೇದವ್ಯಾಸರು

ಮಹಾಭಾರತಾದಿಗಳಲ್ಲಿ ಬಂದ ಶ್ರೀವೇದವ್ಯಾಸರ ಆಶಯವನ್ನು ಯಥಾವತ್ತಾಗಿ ಮೂಡಿಸುವ ಶ್ರೀಮಧ್ವಾಚಾರ್ಯರೊಬ್ಬರೇ ಅಭಿನವವೇದವ್ಯಾಸರೆಂಬ ಹಿರಿಮೆಗೆ ಪಾತ್ರರಾಗಿರುವರು. ಅವರ ಅಪೂರ್ವ ವಾದಸರಣಿಯನ್ನು ಕಂಡ ಅಂದಿನ ಪರವಾದಿಗಳೂ **'ವೇದವ್ಯಾಸೋ ನ್ವೇಷ ವೇದೋ ನು ಮೂರ್ತೋ...'** ಎಂದು

ವೇದವ್ಯಾಸರೇ ಮಧ್ವಾಚಾರ್ಯರ ರೂಪದಲ್ಲಿ ಬಂದಿರುವರೇನೋ ಎಂದು ಆಚ್ಚರಿಪಡುತ್ತಿದ್ದ ವಿವರ ಅವರ ಚರಿತ್ರೆಯಲ್ಲಿ ಬಂದಿದೆ.

## ಪಾಂಡವರೆಲ್ಲ ವ್ಯಾಸಶಿಷ್ಯರು

ಏಕಚಕ್ರನಗರದ ಬ್ರಾಹ್ಮಣನ ಮನೆಯಲ್ಲಿ ಪಾಂಡವರಿಗೆ ವಸತಿಸೌಕರ್ಯವನ್ನು ಕಲ್ಪಿಸುವಾಗ, ಆ ಬ್ರಾಹ್ಮಣನ ಎದುರು 'ಇವರೆಲ್ಲ ನನ್ನ ಶಿಷ್ಯರು' – ಎಂದು ವೇದವ್ಯಾಸರು ಪರಿಚಯಿಸಿಕೊಡುವರು. ಪಾಂಡವರು ನಿಜವಾಗಿಯೂ ವೇದವ್ಯಾಸರ ಶಿಷ್ಯರೇ;

**ಹೇ ಪಂಚ ಪಾಂಡುತನಯಾ ಮುಮುದುರ್ನಿತಾಂತಂ ಸದ್ಧರ್ಮಚಾರಿಣ ಉರುಕ್ರಮಶಿಕ್ಷಿತಾರ್ಥಾಃ।**

## ದುರ್ಯೋಧನಾರ್ಥೇ

ದ್ರೌಪದೀಸ್ವಯಂವರದ ಸ್ಪರ್ಧೆಯಲ್ಲಿ ತೊಡಗಿದ್ದ ಕರ್ಣನ ಉದ್ದೇಶ ದುರ್ಯೋಧನನಿಗೆ ದ್ರೌಪದಿಯು ಸಿಗುವಂತೆ ಮಾಡಬೇಕೆಂಬುದು. ಹೀಗೆ '.....ಧನಾರ್ಥೇ' ಮಾಡಬಾರದ ಕೆಲಸಗಳನ್ನು ಮಾಡಲು ತಯಾರಾಗುವ ಜನರೇ ಹೆಚ್ಚಾಗಿ ಯಾವಾಗಲೂ ಇರುವರು.

## ಬಲಗೈಯಲ್ಲಿ ತೆಗೆಯಬೇಕು

ಜರಾಸಂಧ ಕರ್ಣ ಮುಂತಾದವರು ಬಿಲ್ಲನ್ನು ಎಡಗೈಯಲ್ಲಿಯೇ ಮೇಲಕ್ಕೆತ್ತಿದ್ದರೆ ಅರ್ಜುನ ಬಲಗೈಯಿಂದ ಬಿಲ್ಲನ್ನು ಮೇಲಕ್ಕೆತ್ತಿ, ಎಡಗೈಯಿಂದ ಹಿಡಿದುಕೊಂಡು ಬಾಣಗಳನ್ನು ಹೂಡುವನು, ಆ ಮೂಲಕ ಬಿಲ್ಲಿಗೆ ಗೌರವವನ್ನು ಸಲ್ಲಿಸುವನು. ಪೂಜಾಕಾಲದಲ್ಲಿ ಎಡಗೈಯಿಂದಲೇ ಗಂಟೆಯನ್ನು ಬಾರಿಸಬೇಕಾದರೂ ಮೊದಲು ಬಲಗೈಯಿಂದ ತೆಗೆದು, ಮತ್ತೆ ಎಡಗೈಯಿಂದ ಹಿಡಿದುಕೊಂಡು ಬಾರಿಸಬೇಕು. ಆಗ ಗಂಟೆಗೆ ಗೌರವವನ್ನು ಸಲ್ಲಿಸಿದಂತಾಗುವುದು.

## ಕಲಿಯುಗದ ದುರಂತ

ಯಾವುದನ್ನು ತಿಳಿದುಕೊಳ್ಳಲೇಬೇಕಾಗಿದೆಯೋ ಅದರ ಬಗ್ಗೆ ಉಪೇಕ್ಷೆ ತೋರಿಸಿ, ಯಾವುದನ್ನು ತಿಳಿದುಕೊಳ್ಳದೆಯೇ ಬದುಕಬಹುದೋ ಅದರ ಬಗ್ಗೆ ಕೂಲಂಕಷವಾಗಿ ವಿಚಾರ, ವಿಮರ್ಶೆ ನಡೆಸುವಂತಹದ್ದು ಕಲಿಯುಗದ ಒಂದು ದುರಂತ. ದೇವರು, ಧರ್ಮದ ಬಗ್ಗೆ ಉಪೇಕ್ಷೆ; ಭೌತಿಕಪದಾರ್ಥಗಳ ಬಗ್ಗೆ ಎಲ್ಲಿಲ್ಲದ ಕುತೂಹಲ! ಇದು ಈ ಕಾಲದ ಲಕ್ಷಣ.

## ಶಾಸ್ತ್ರಗಳಿಗೆ ಜೀವಂತಿಕೆ

ಹನುಮಂತ ಸಂಜೀವನ ಪರ್ವತವನ್ನು ತಂದು ಮೃತರಾಗಿದ್ದ ಕಪಿಗಳಿಗೆ ಜೀವಂತಿಕೆಯನ್ನು ನೀಡಿದ್ದ. ಅದೇ ಹನುಮಂತನ ಅವತಾರರಾದ ಶ್ರೀಮಧ್ವಾಚಾರ್ಯರು ಮೃತಪ್ರಾಯಗಳಾಗಿದ್ದ ಶಾಸ್ತ್ರಗಳಿಗೆ ಮತ್ತೆ ಜೀವಂತಿಕೆಯನ್ನು, ಚೇತರಿಕೆಯನ್ನು ನೀಡಿರುವರು. ಆಚಾರ್ಯರ ವ್ಯಾಖ್ಯಾನ ಆಗುವುದಕ್ಕೆ ಮುಂಚೆ ಬ್ರಹ್ಮಸೂತ್ರಾದಿಶಾಸ್ತ್ರಗಳು ಇದ್ದರೂ ತಮ್ಮ ನೈಜ ಆಂತರ್ಯವನ್ನು ಹೊರಹೊಮ್ಮಿಸದ ಪ್ರಯುಕ್ತ ಇಲ್ಲದಂತೆಯೇ

ಆಗಿದ್ದವು. ಹೀಗೆ 'ಮೃತಪ್ರಾಯ'ಗಳಾಗಿದ್ದ ಅವುಗಳಿಂದ ನಿಜವಾದ ಅರ್ಥ ಹೊರಹೊಮ್ಮುವಂತೆ ಮಾಡುವ ಮೂಲಕ ಅವುಗಳಿಗೆ ಜೀವಂತಿಕೆ ನೀಡಿದ್ದು ಅವರ ಹಿರಿಮೆ.

## ಸುಮ್ಮನಿರಬೇಕಷ್ಟೇ

ಮಹಾಭಾರತ, ರಾಮಾಯಣಗಳನ್ನು ನಾವು ಓದಿಲ್ಲ– ಎಂದರೆ ಸುಮ್ಮನಿರಬೇಕಷ್ಟೇ ಹೊರತು ಓದದೆಯೂ ಅದರ ವಿಷಯದಲ್ಲಿ ತಮಗೆ ತೋಚಿದ್ದನ್ನೆಲ್ಲ ನುಡಿಯಬಾರದು. ಒಬ್ಬನಿಗೆ ಇದ್ದಕ್ಕಿದ್ದಂತೆ ಹೃದಯಾಘಾತವಾಯಿತೆಂದು ಇಟ್ಟುಕೊಳ್ಳೋಣ. ಆಗ ವೈದ್ಯಶಾಸ್ತ್ರ ಗೊತ್ತಿಲ್ಲದವರು ಸುಮ್ಮನೆ ದೂರ ಇರಬೇಕೇ ಹೊರತು ತಮಗೆ ತೋಚಿದ ಚಿಕಿತ್ಸೆಗೆ ತೊಡಗಿ ರೋಗಿಯ ಬದುಕಿಗೇ ತಿಲಾಂಜಲಿ ನೀಡಬಾರದು. ವೈದ್ಯಕೀಯ ಗೊತ್ತಿಲ್ಲದವರು ವೈದ್ಯಕ್ಷೇತ್ರವನ್ನು ಪ್ರವೇಶಿಸುವುದಿಲ್ಲ. ಇಂಜಿನಿಯರಿಂಗ್ ತಿಳಿಯದವರು ಆ ಕ್ಷೇತ್ರಕ್ಕೆ ಕೈ ಹಾಕಕೂಡದು. ಆದರೆ ಮಹಾಭಾರತ, ರಾಮಾಯಣಾದಿಗಳ ಬಗ್ಗೆ ಎಲ್ಲರೂ ವಿಮರ್ಶೆ ಮಾಡುವವರೇ. ಹೀಗಾಗಿ ಸುಲಭವಾಗಿ ಸರಿಪಡಿಸಲಾಗದಷ್ಟು ರಾಮಾಯಣ, ಮಹಾಭಾರತ, ಪುರಾಣಗಳು ಸಾಕಷ್ಟು ಹದಗೆಟ್ಟಿದ್ದವು. ಅವುಗಳ ಹಿರಿಮೆಯನ್ನು ಮರಳಿ ಎತ್ತಿ ಹಿಡಿದ ಕೀರ್ತಿ ಶ್ರೀಮಧ್ವಾಚಾರ್ಯರಿಗೇ ಸಲ್ಲುವುದು.

## ಕಲಿಯುಗದ ದ್ರೌಪದಿ !

ದ್ರೌಪದೀದೇವಿಯ ದೇಹದಲ್ಲಿ ಐದುಜೀವರ ಸಮಾವೇಶದ ಪ್ರಮೇಯವನ್ನು ತಿಳಿಯದವರು ದ್ರೌಪದಿಯ ವ್ಯಕ್ತಿತ್ವಕ್ಕೆ ತುಂಬ ಅನ್ಯಾಯ ಮಾಡುವುದುಂಟು. ಕೆಲವು ವರ್ಷಗಳ ಹಿಂದೆ ಮದ್ರಾಸಿನಲ್ಲಿ ಒಬ್ಬ ಹೆಂಗಸು ಒಬ್ಬ ಗಂಡಸನ್ನು ಮದುವೆಯಾಗಿ ಅವನ ಜೊತೆ ಒಂದು ವರ್ಷ ಸಂಸಾರ ಮಾಡಿ ಮತ್ತೆ ಅವನನ್ನು ಕೊಂದು ಹಾಕಿದಳು; ಅನಂತರ ಮತ್ತೊಬ್ಬನನ್ನು ಮದುವೆಯಾಗಿ ಅವನ ಜೊತೆಗೂ ಒಂದು ವರ್ಷ ಇದ್ದು ಅವನನ್ನೂ ಕೊಂದು ಹಾಕಿದಳು. ಹೀಗೆ ವರ್ಷವರ್ಷಕ್ಕೆ ಒಬ್ಬೊಬ್ಬ ಗಂಡಸರನ್ನು ಮದುವೆಯಾಗುತ್ತಿದ್ದಳು; ಅನಂತರ ಅವರನ್ನು ಕೊಲ್ಲುತ್ತಿದ್ದಳು. ಇದು ನಡೆದ ಘಟನೆ. ಇದನ್ನು ಒಂದು ಪತ್ರಿಕೆ ವರದಿಮಾಡುತ್ತ 'ಕಲಿಯುಗದ ದ್ರೌಪದಿ' ಎಂಬ ಕೆಟ್ಟ ಶೀರ್ಷಿಕೆಯನ್ನು ಕೊಟ್ಟಿತ್ತು. ಎಂದರೆ ಮಹಾಭಾರತದ ನಾಯಕಿಯಾದ ದ್ರೌಪದಿಯನ್ನು ಆ ದುಷ್ಟಹೆಂಗಸಿನ ಮಟ್ಟಕ್ಕೆ ಇಳಿಸಿತ್ತು. ಲಕ್ಷಗಟ್ಟಲೆ ಜನ ಆ ಪತ್ರಿಕೆಯನ್ನು ಓದಿದ್ದರೂ ಯಾರೊಬ್ಬರೂ ಅದನ್ನು ಪ್ರತಿಭಟಿಸಲಿಲ್ಲ. ಅದೇ ಬಗೆಯ ವರದಿ ಒಂದು ವೇಳೆ ಬೇರೆ ಮತದವರ ಬಗ್ಗೆ ಬಂದಿದ್ದರೆ ಆ ಮತದವರು ಯಾವ ರೀತಿಯ ಪ್ರತಿಕ್ರಿಯೆಯನ್ನು ತೋರ್ಪಡಿಸುತ್ತಿದ್ದರೆಂಬುದರ ಹಿನ್ನೆಲೆಯಲ್ಲಿ ನಾವು ನಮ್ಮ ಆತ್ಮನಿರೀಕ್ಷಣೆ ಮಾಡಿಕೊಳ್ಳಬೇಕು.

## ಅನಾಗರಿಕತೆಯ ಲಕ್ಷಣವಲ್ಲ

ದ್ರೌಪದಿಯನ್ನು ಪಂಚಪಾಂಡವರು ವಿವಾಹವಾದುದು ಅನಾಗರಿಕತೆಯ ಲಕ್ಷಣವಲ್ಲ. ಅವಳ ದೇಹದಲ್ಲಿ ಐದು ಮಂದಿ ವಿಭಿನ್ನ ದೇವತಾಸ್ತ್ರೀಯರುಗಳಿದ್ದು, ಅವರು ಪ್ರತ್ಯೇಕ ಪ್ರತ್ಯೇಕವಾಗಿ ತಮ್ಮ ತಮ್ಮ ಗಂಡಂದಿರನ್ನು ವಿವಾಹವಾದುದಷ್ಟೇ. ಆದರೆ

ಸಾಮಾನ್ಯವಾಗಿ ತಿಬೇಟ್ ಮುಂತಾದ ಪ್ರದೇಶಗಳಲ್ಲಿರುವಂತಹ ಇದೊಂದು ಅನಾಗರಿಕತನದ ಕ್ರಮ ಎಂದು ಕೆಲವರು ಭಾವಿಸುವುದುಂಟು. ಆದರೆ ಮಹಾಭಾರತಕಾಲದಲ್ಲಿ ಈ ರೀತಿಯಾಗಿ ಅನೇಕ ಗಂಡಸರು ಒಬ್ಬ ಹೆಂಗಸನ್ನು ವಿವಾಹವಾದುದು ಬೇರೆ ಯಾವ ಪ್ರಸಂಗದಲ್ಲೂ ಇಲ್ಲ. ಆದುದರಿಂದ ಅದು ಆ ಕಾಲದ ಪದ್ಧತಿ ಎಂದೇನೂ ಹೇಳುವಂತಿಲ್ಲ. ಶಚ್ಯಾದಿಗಳ ಶಾಪಬಿಡುಗಡೆಗಾಗಿ ದ್ರೌಪದಿಯ ವಿಷಯದಲ್ಲಿ ಮಾತ್ರ ನಡೆದ ವಿಶೇಷ ದೈವಿಕ ಪ್ರಸಂಗ.

## ಅರ್ವಾಚೀನರ ವಿಚಾರ ಅರ್ಥಹೀನ

ಕೆಲವರು ದ್ರುಪದನ ಮನೆತನದಲ್ಲಿ ಹೀಗೆ ಒಬ್ಬ ಕನ್ಯೆಯನ್ನು ಅನೇಕ ವರರಿಗೆ ಕೊಡುವ ಪದ್ಧತಿ ಇತ್ತೆಂದು ವಾದಿಸುವುದುಂಟು. ಆದರೆ ದ್ರುಪದನಿಗೆ ದ್ರೌಪದಿ ಬಿಟ್ಟು ಬೇರೆ ಹೆಣ್ಣು ಮಗಳೇ ಇರಲಿಲ್ಲ. ಆದ್ದರಿಂದ ಕನ್ಯೆಯನ್ನು ಅನೇಕ ವರರಿಗೆ ನೀಡಿ ಮದುವೆ ಮಾಡುವ ಕ್ರಮ ಇತ್ತೆಂಬುದಕ್ಕೆ ಬೇರೆ ಒಂದೂ ದೃಷ್ಟಾಂತವೇ ಇಲ್ಲ. ಇನ್ನು ಪಾಂಡವರಲ್ಲಿಯೂ ಈ ಕ್ರಮ ಇರಲಿಲ್ಲ. ಯುಧಿಷ್ಠಿರ ದ್ರೌಪದಿಯನ್ನಲ್ಲದೆ ದೇವಕೀ ಎಂಬವಳನ್ನೂ ವಿವಾಹವಾಗಿದ್ದ, ಭೀಮಸೇನ ಕಾಳೀ ಎಂಬವಳನ್ನೂ ವಿವಾಹವಾಗಿದ್ದ, ನಕುಲ-ಸಹದೇವರಿಗೂ ಪ್ರತ್ಯೇಕ ಪತ್ನಿಯರು ಇದ್ದರು. ಆಯಾ ಕನ್ಯೆಯರು ಆಯಾ ಪತಿಯರಿಗಷ್ಟೇ ಪತ್ನಿಯರಾಗಿದ್ದರು. ಅಂದ ಮೇಲೆ ಅವರಲ್ಲಿಯೂ ಈ ಪದ್ಧತಿ ಇತ್ತೆಂದು ಹೇಳಲಾಗುವುದಿಲ್ಲ. ಆದ್ದರಿಂದ ಇದು ಒಂದು ವಿಶಿಷ್ಟ ದೈವಿಕ ಘಟನೆ ಎಂಬುದೇ ಸರಿ.

## ಅರ್ಥ ಇಲ್ಲ ಅನ್ನಕೂಡದು

ಜಗತ್ತಿನಲ್ಲಿ ನಮಗೆ ಅರ್ಥವಾಗದ ವಿಚಾರಗಳೇ ಹೆಚ್ಚು. ಅದರಂತೆಯೇ ಮಹಾಭಾರತ, ರಾಮಾಯಣಗಳ ಎಷ್ಟೋ ಪ್ರಮುಖ ಭಾಗಗಳು ನಮಗೆ ಅರ್ಥವಾಗಿಲ್ಲ ಎನ್ನಬಹುದು. ಅದು ನಮ್ಮ ದೌರ್ಬಲ್ಯವನ್ನು ಒಪ್ಪಿಕೊಂಡಂತಾಗುವುದಷ್ಟೇ. ಆದರೆ ಇದರ ಬದಲಾಗಿ ಅದಕ್ಕೆ ಅರ್ಥವೇ ಇಲ್ಲ ಎಂದು ಮಾತ್ರ ಹೇಳಕೂಡದು. ಅರ್ಥ ಇಲ್ಲ ಎಂದರೆ ಅದು ಅದರ ನ್ಯೂನತೆಯನ್ನು ಹೇಳಿದಂತೆ; ಅರ್ಥ ಆಗಿಲ್ಲ ಎಂಬುದು ನಮ್ಮ ನ್ಯೂನತೆ. ಅದನ್ನು ಒಪ್ಪಿಕೊಳ್ಳುವ ಬದಲು ಅದರಲ್ಲೇ ನ್ಯೂನತೆಯನ್ನು ಆರೋಪಿಸುವುದು ಅವಿವೇಕದ ಪರಮಾವಧಿಯೇ ಸರಿ.

## ಎಲ್ಲದರ ಪರಿಶೀಲನೆ ನಡೆಸಬೇಕು

ಪುರಾಣದ ಅಥವಾ ಮಹಾಭಾರತದ ಯಾವುದೋ ಒಂದು ಮಾತಿಗೆ ಅರ್ಥೈಸಬೇಕೆಂದರೆ ಆ ಮಾತಿನ ಪೂರ್ವಾಪರವನ್ನು ವಿಶ್ಲೇಷಿಸಬೇಕಲ್ಲದೆ, ಪುರಾಣ, ಇತಿಹಾಸ, ವೇದ ಮುಂತಾದ ಸದ್ಗ್ರಂಥಗಳನ್ನೆಲ್ಲ ಪರಿಶೀಲಿಸಬೇಕು. ಆಗಷ್ಟೇ ಸಮಗ್ರಶಾಸ್ತ್ರದ ಮಹಾತಾತ್ಪರ್ಯಕ್ಕೆ ಅನುಗುಣವಾಗುವಂತೆ ಅರ್ಥೈಸಬಹುದಾಗುತ್ತದೆ. ದ್ರೌಪದಿಯ ಸ್ವರೂಪದ ಬಗ್ಗೆ ತಿಳಿಸುವಾಗ ಶ್ರೀಮದಾಚಾರ್ಯರು **'ವೇದೇಷು ಸಪುರಾಣೇಷು ಭಾರತೇ**

**ಚಾವಗಮ್ಯತೇ'** – ಎಂಬುದಾಗಿ ವೇದಾದಿಗಳನ್ನೆಲ್ಲ ಪರಿಶೀಲಿಸಿದರೆ ಈ ಪ್ರಮೇಯ ಸ್ಪಷ್ಟವಾಗುವುದೆಂದು ನಿರೂಪಿಸುವ ಮೂಲಕ ಈ ವಿಚಾರವನ್ನು ಸೂಚಿಸಿರುವರು.

## ದಿವ್ಯದರ್ಶನದ ಪ್ರದಾನ

ಅರ್ಜುನನಿಗೆ ದಿವ್ಯ ದೃಷ್ಟಿಯನ್ನು ನೀಡಿ ತನ್ನ ವಿಶ್ವರೂಪವನ್ನು ತೋರಿಸಿದ ಯಾದವಕೃಷ್ಣ ಹೇಗೆ ಸಾಕ್ಷಾತ್‌ಪರಮಾತ್ಮನೆಂದು ಎಲ್ಲರಿಂದಲೂ ಒಪ್ಪಲಾಗುವುದೋ ಹಾಗೆಯೇ ದ್ರುಪದನಿಗೆ ದಿವ್ಯದೃಷ್ಟಿ ಕೊಟ್ಟು ಪಾಂಡವರ, ದ್ರೌಪದಿಯ ಮೂಲರೂಪವನ್ನು ತೋರಿಸಿದ ವಾಸಿಷ್ಠಕೃಷ್ಣ ಶ್ರೀವೇದವ್ಯಾಸರೂ ಸಾಕ್ಷಾತ್ ಪರಮಾತ್ಮ ಎಂಬುದು ಸ್ಪಷ್ಟ. ಕೆಲವರು ಭ್ರಮಿಸಿರುವಂತೆ ಅವರು **'ಕಶ್ಚನ ಋಷಿ'** ಅಲ್ಲ. **'ಮುನೀನಾಮಪ್ಯಹಂ ವ್ಯಾಸಃ'** ಮುನಿಗಳಲ್ಲಿ ವೇದವ್ಯಾಸರು ನಾನು ಎಂಬ ಭಗವಂತನ ಗೀತಾವಚನವನ್ನು ಇಲ್ಲಿ ಗಮನಿಸಬೇಕು.

## ಕಲಹ ಕಲಿಯ ಅಸಾಧಾರಣ ಲಕ್ಷಣ

ದುರ್ಯೋಧನ ಕಲಿ; ಕಲಹ ಕಲಿಯ ಅಸಾಧಾರಣ ಲಕ್ಷಣ; ಆದುದರಿಂದಲೇ ದುರ್ಯೋಧನ ಎಲ್ಲಿಗ್ಗೆ ಹೋಗಲಿ ಅಲ್ಲಿ ಕಲಹ. ಯಜ್ಞದಲ್ಲಿ ಸ್ವಯಂವರದಲ್ಲಿ ... ಹೀಗೆ ಪ್ರತಿಯೊಂದು ಕಡೆಯೂ ಕಲಹ. ಸಾಯುವಾಗಲೂ ಕಲಹ ಮಾಡುತ್ತಲೇ ಸತ್ತವನು ಅವನು. ಅಂತಹ ಕಲಿಯ ಯುಗ ಇದಾದುದರಿಂದಲೇ ಗಂಡ– ಹೆಂಡತಿ, ತಂದೆ– ಮಕ್ಕಳು, ಗುರು– ಶಿಷ್ಯರು ಹೀಗೆ ಎಲ್ಲೆಡೆ ಈಗ ಕಲಹ. ಅದು ಯುಗದ ಪ್ರಭಾವ.

## ಮಾನವೀಯ ಮೌಲ್ಯಗಳ ಅಧಃಪತನ

ಹಿಂದೆ ಸುಮಾರು ಇಪ್ಪತ್ತು ವರ್ಷಗಳ ಹಿಂದೆ ರಾಜಕಾರಣಿಗಳ ಮೇಲೆ ಭ್ರಷ್ಟಾಚಾರದ ಆರೋಪ ಹೊರಿಸಿದಲ್ಲಿ ಅವರು ತಾವು ಭ್ರಷ್ಟಾಚಾರ ಮಾಡಲೇ ಇಲ್ಲ ಎಂದು ಹೇಳಿಕೊಳ್ಳುತ್ತಿದ್ದರು. ಆದರೆ ಈಗ ಹಾಗೆ ಆರೋಪಿಸಿದಲ್ಲಿ ನಾವು 'ಹಿಂದಿನವರಷ್ಟು ಭ್ರಷ್ಟಾಚಾರ ನಡೆಸಿಲ್ಲ' ಎಂದು ಸಾಧಿಸುವಷ್ಟು ಕೆಳಮಟ್ಟಕ್ಕೆ ಬಂದಿರುವರು. ಮುಂದೊಮ್ಮೆ– 'ಭ್ರಷ್ಟಾಚಾರ ನಡೆಸುವವನೇ ಮಹಾಪುರುಷ' – ಎಂದು ಹೇಳುವ ಸ್ಥಿತಿಯೂ ಬಂದೀತು. ಇದೇನೂ ನೂರಾರು ವರ್ಷಗಳ ಅವಧಿಯಲ್ಲಿ ನಡೆದ ಬದಲಾವಣೆ ಅಲ್ಲ. ಹತ್ತಿಪ್ಪತ್ತು ವರ್ಷಗಳ ಅಂತರದಲ್ಲಿಯೇ ಮಾನವೀಯ ಮೌಲ್ಯಗಳು ಎಷ್ಟೊಂದು ಅಧಃಪತನವನ್ನು ಹೊಂದುತ್ತಿವೆ.

## ಅಧರ್ಮದ ಜೊತೆ ಸಾಮರಸ್ಯ

ಈಗ ಧರ್ಮದ ಅನುಶಾಸ್ತಿ ಬಿಟ್ಟು, ಅಧರ್ಮ ನಡೆದಾಗ 'ಇದು ಅಧರ್ಮ' ಎಂದು ಹೇಳುವ ಸ್ಥಿತಿಯಲ್ಲೂ ಜನ ಇಲ್ಲ. ಯಾರಾದರೂ ಅಧರ್ಮ ಮಾಡಿದರೆ ಇರಲಿ ಬಿಡಿ; ಅವರ ಜೊತೆಗೆ ಹೊಂದಿಕೊಳ್ಳಿ ಎಂದು ಹೇಳುವ ಸ್ಥಿತಿ ಇಂದಿನದು. ಒಬ್ಬನು ತಪ್ಪು ಮಾಡಿದರೆ ಹೋಗಲಿ ಬಿಡಿ; ನೀವೂ ಹೊಂದಿಕೊಳ್ಳಿ; ಬೇಕಾದರೆ ನೀವೂ ಅಂತಹ ತಪ್ಪನ್ನು ಮಾಡಿ ಎಂದು ಸಮಜಾಯಿಷಿ ನೀಡುವಂತಹ ಕೆಟ್ಟ ಕಾಲದಲ್ಲಿ ನಾವಿದ್ದೇವೆ.

## ವೈಷ್ಣವ ಮತದಲ್ಲಿ ಎಲ್ಲ ದೇವತೆಗಳ ಸ್ತೋತ್ರ

ಹರಿ ಹರ ಮೊದಲಾಗಿ ಎಲ್ಲ ದೇವತೆಗಳ ಸ್ತೋತ್ರ ನಡೆಸಿದ ಒಂದೇ ಒಂದು ಮತ ಎಂದರೆ ವೈಷ್ಣವಮತ ಮಾತ್ರ. ಇದರಲ್ಲಿ ಎಲ್ಲ ದೇವತೆಗಳನ್ನೂ ಅವರ ಯೋಗ್ಯತೆಯ ತಾರತಮ್ಯವನ್ನು ಅನುಸರಿಸಿ ಉಚಿತ ರೀತಿಯಲ್ಲಿ ಸ್ತೋತ್ರ ಮಾಡುವ ಅವಶ್ಯ ವಿಧಿ ಉಂಟು. ಇತರ ಮತಗಳಲ್ಲಿ ಆ ಒಬ್ಬ ದೇವತೆಯನ್ನು ಹೊರತು ಇತರ ದೇವತೆಗಳನ್ನು ನಿಕೃಷ್ಟವಾಗಿ ಕಾಣುವ ಕೆಟ್ಟ ಪರಿಪಾಠ ಉಂಟು.

## ಅನುತ್ತೀರ್ಣನಾದ ವಿದ್ಯಾರ್ಥಿಯಂತೆ

ಅನುತ್ತೀರ್ಣನಾದ ಕೆಟ್ಟ ವಿದ್ಯಾರ್ಥಿ ತನ್ನ ನ್ಯೂನತೆಯನ್ನು ಒಪ್ಪಿಕೊಳ್ಳಲು ಸಿದ್ಧನಾಗದೆ, ತಾನು ಅನುತ್ತೀರ್ಣನಾದೆ ಎನ್ನುವ ಬದಲು ತನ್ನನ್ನು ಅನುತ್ತೀರ್ಣನನ್ನಾಗಿ ಮಾಡಿದರೆಂದು ಅಧ್ಯಾಪಕರ ಮೇಲೆ ಆರೋಪ ಹೊರಿಸುವುದುಂಟು. ಕಾಳಿ ಸ್ವಯಂವರದಲ್ಲಿ ಅವಳಿಂದ ಸ್ವೀಕೃತರಾಗದ ಜರಾಸಂಧ, ದುರ್ಯೋಧನ ಮೊದಲಾದವರು ಸ್ವೀಕೃತವಾಗುವ ಅರ್ಹತೆ ಪಡೆದಿಲ್ಲ ಎಂಬ ಸತ್ಯವನ್ನು ಒಪ್ಪಿಕೊಳ್ಳುವ ಬದಲು ನ್ಯಾಯಬಾಹಿರವಾದ ಕಲಹಕ್ಕೆ ತೊಡಗಿದ್ದು ಇಂತಹ ಧೂರ್ತತನವೇ ಆಗಿದೆ.

## ತಾರತಮ್ಯತತ್ತ್ವದ ಪುನರುತ್ಥಾನ

ತಾರತಮ್ಯತತ್ತ್ವ ವೇದಶಾಸ್ತ್ರದಲ್ಲಿಯೇ ನಿರೂಪಿತವಾಗಿರುವಂತಹದ್ದು. ಆದರೆ ಅದನ್ನು ಬೆಳಕಿಗೆ ತಂದು ಪುನರುತ್ಥಾನಗೊಳಿಸಿದ ಕೀರ್ತಿ ಶ್ರೀಮಧ್ವಾಚಾರ್ಯರಿಗೇ ಸಲ್ಲಬೇಕಾದದ್ದು. ಅವರು ಯಾವುದೇ ವೈದಿಕ ದೇವತೆಯನ್ನು ಬಿಡದೆ ಎಲ್ಲ ದೇವತೆಗಳನ್ನೂ, ಸಕಲ ಸದ್ಗುರುಗಳನ್ನು ತಾರತಮ್ಯಕ್ರಮದಲ್ಲಿ ಗೌರವಿಸಲೇಬೇಕು ಎನ್ನುವವರು. ಆದರೆ ಪೂಜಾವಿಧಾನವಾಗಲಿ, ಚಿಂತನಕ್ರಮವಾಗಲಿ ಅವರ ಸ್ಥಾನಮಾನಕ್ಕೆ ಉಚಿತವಾಗಿರಲೇಬೇಕು ಎಂಬ ಎಚ್ಚರವನ್ನೂ ಅವರು ನೀಡಿರುವರು.

## ಉಮಾಧವನ ಅನುಗ್ರಹ

ಮನೋನಿಯಾಮಕನಾದ ಉಮಾಧವನ ಅನುಗ್ರಹವಿಲ್ಲದೆ ಅವನಿಗಿಂತ ಕೆಳಗಿನವರಿಗೆ ಮಾಧವನ, ರಮಾಧವನ ದರ್ಶನ ದೊರಕಲಾರದು – ಎಂದು ಒತ್ತಿ ಹೇಳಿದವರು ಶ್ರೀಮಧ್ವಾಚಾರ್ಯರು.

## ಜರಾಸಂಧನ ವ್ರತ

ಗಂಗೆ ವಿಷ್ಣುಪಾದೋದಕ ಎಂಬ ದೃಷ್ಟಿಯಿಂದ ಶೈವನಾದ ಜರಾಸಂಧ ತಾನು ಗಂಗಾಸ್ನಾನ ಮಾಡುವುದೇ ಇಲ್ಲ ಎಂದು ವ್ರತ ತೊಟ್ಟಿದ್ದ. ನಮ್ಮಲ್ಲಿಯೂ ಅಂತಹ ಜರಾಸಂಧನ ವ್ರತವನ್ನು ಪಾಲಿಸುವವರಿದ್ದಾರೆ. ಗಂಗಾಸ್ನಾನ ಎಂದರೆ ವಿಷ್ಣುಪ್ರತಿಪಾದಕ ಸಚ್ಛಾಸ್ತ್ರಗಳ ಅಧ್ಯಯನ. 'ನಾವು ಶಾಸ್ತ್ರಾಧ್ಯಯನ ಮಾಡುವುದೇ ಇಲ್ಲ; ನಮಗೆ ಅವೆಲ್ಲ ಯಾಕೆ?' ಎಂದು ಅನೇಕರು ಶಾಸ್ತ್ರಾಧ್ಯಯನದಿಂದ ದೂರಾಗಿರುವರು. ಕಥೆ ಕಾದಂಬರಿ

ಪುಸ್ತಕ ಬೇಕಾದರೆ ಕೊಡಿ; ನಮ್ಮ ಮೊಮ್ಮಕ್ಕಳಾದರೂ ಅದನ್ನು ಓದಿಯಾರು – ಎಂದು ಅಂತಹಪುಸ್ತಕಗಳ ಪಠನದಲ್ಲಿ ಮಾತ್ರ ಅವರಿಗೆ ಆಸಕ್ತಿ. ಅಂತಹವರು ಗಂಗಾಸ್ನಾನದಿಂದ ದೂರನಾದ ಜರಾಸಂಧನ ವ್ರತವನ್ನೇ ಅನುಕರಿಸುವವರು!

## ವಿಷ್ಣುಸರ್ವೋತ್ತಮತ್ವ ಗೆದ್ದಂತೆ

ಒಬ್ಬ ವ್ಯಕ್ತಿ ಸೋತನೆಂದರೆ ಆ ವ್ಯಕ್ತಿ ಪ್ರತಿಪಾದಿಸುವ ಪಕ್ಷವೇ ಸೋತಂತೆ. ಆದರಂತೆ ಜರಾಸಂಧಾದಿಗಳು ಸೋತರೆಂದರೆ ಅವರು ಸಮರ್ಥಿಸುತ್ತಿದ್ದ ಶಿವಸರ್ವೋತ್ತಮತ್ವದ ಪಕ್ಷವೇ ಸೋತಂತೆ. ಭೀಮಸೇನ ಗೆದ್ದನೆಂದರೆ ಅವನು ಪ್ರತಿಪಾದಿಸಿದ ವಿಷ್ಣುಸರ್ವೋತ್ತಮತ್ವ ಪಕ್ಷವೇ ಗೆದ್ದಂತೆ. ಮುಂದೆ ಜಯಿಸಿದ್ದೂ ಭೀಮಸೇನನೇ; ಎಂದರೆ ಹರಿಸರ್ವೋತ್ತಮತ್ವವನ್ನೇ ಸಾಧಿಸಿ ತೋರಿಸಿದನು ಎಂದರ್ಥ.

## ಬಲಾತ್ಕಾರದ ಗಂಗಾಸ್ನಾನ

ಭೀಮಸೇನ ಜರಾಸಂಧನನ್ನೇ ಎತ್ತಿ ಗಂಗಾನದಿಯೊಳಗೆ ಹಾಕಿ, ಗಂಗಾಸ್ನಾನ ಮಾಡುವುದಿಲ್ಲ ಎಂಬ ಅವನ ವ್ರತವನ್ನು ಕೆಡಿಸುವನು. ಭೀಮಸೇನನ ಮೂಲಕ ಜರಾಸಂಧನಿಗೆ ಗಂಗಾಸ್ನಾನ ಆಗಿದೆ ಎಂದರೆ, ಒಂದು ವೇಳೆ ಜರಾಸಂಧನಿಗೆ ಒಳ್ಳೆಯ ಭಾವನೆ ಇರುತ್ತಿದ್ದರೆ ಆಗಲೇ ಮುಕ್ತಿ ದೊರಕುತ್ತಿತ್ತು. ಆದರೆ ಜರಾಸಂಧ 'ಅಯ್ಯೋ ಗಂಗಾಸ್ನಾನ ಮಾಡಬೇಕಾಯಿತಲ್ಲ!' ಎಂಬ ದುರ್ಭಾವನೆಗೊಳಗಾಗಿ ಗಂಗಾಸ್ನಾನ ಮಾಡಿದುದರಿಂದ ಅವನಿಗೆ ಪುಣ್ಯದ ಬದಲು ಪಾಪವೇ ಬಂತು. ಅಂತೆಯೇ ಗಂಗಾಸ್ನಾನದಂತೆ ಶಾಸ್ತ್ರಾಭ್ಯಾಸ, ಪುರಾಣ, ಪ್ರವಚನ ಶ್ರವಣಾದಿಗಳನ್ನು ಗೌರವ ಭಾವನೆಯಿಂದ ನಡೆಸಬೇಕು. ಅದರ ಬದಲಾಗಿ, 'ಅಯ್ಯೋ! ಶಾಸ್ತ್ರ ಓದಬೇಕಲ್ಲ! ಪುರಾಣ ಕೇಳಬೇಕಲ್ಲ !' ಎಂದು ದುಃಖದಿಂದ ಶಾಸ್ತ್ರಾಭ್ಯಾಸ ನಡೆಸಿದರೆ ಅದರಿಂದ ಪುಣ್ಯದ ಬದಲು ಪಾಪವೇ ಬಂದರೆ ಆಶ್ಚರ್ಯವಿಲ್ಲ.

## ಗ್ರಂಥಸಂಗ್ರಹಕಾರರು

ಮತಾಚಾರ್ಯರಲ್ಲಿ ದೊಡ್ಡ ಗ್ರಂಥಸಂಗ್ರಹಕಾರರೆಂದರೆ ಶ್ರೀಮದಾಚಾರ್ಯರು ಮಾತ್ರ. ಸರ್ವಜ್ಞರಾದ ಅವರಿಗೆ ಗ್ರಂಥಗಳ ಅವಶ್ಯಕತೆ ಇರಲಿಲ್ಲ. ಆದರೆ ಮತ ಉಳಿಯಬೇಕಾದರೆ ಪಾಠ ಪ್ರವಚನ ದೊಡ್ಡ ಪ್ರಮಾಣದಲ್ಲಿ ನಡೆಯಬೇಕು. ಗ್ರಂಥಗಳ ಸಂಗ್ರಹವಿದ್ದರಷ್ಟೇ ಪಾಠಪ್ರವಚನಗಳು ನಡೆಯಲು ಸಾಧ್ಯ. ಈ ಉದ್ದೇಶದಿಂದಷ್ಟೇ ಆಚಾರ್ಯರು ಸಕಲ ಮೂಲಗ್ರಂಥಗಳನ್ನು ಸಂಗ್ರಹಿಸಿ ಶಿಷ್ಯರುಗಳ ಪಾಠಪ್ರವಚನಕ್ಕೆ ಸಮಗ್ರ ಸೌಲಭ್ಯವನ್ನು ಕಲ್ಪಿಸಿದ್ದರು.

## ಗ್ರಂಥಗಳ ಅಪಹಾರ

ಶ್ರೀಮದಾಚಾರ್ಯರಲ್ಲಿ ಅಪೂರ್ವ ಗ್ರಂಥಗಳಿದ್ದವು. 'ಆ ಗ್ರಂಥಗಳ ನೆರವಿನಿಂದಾಗಿಯೇ ಅವರು ವಾದಗಳಲ್ಲಿ ಗೆಲ್ಲುವರು. ಹಾಗಾದರೆ ಆ ಗ್ರಂಥಗಳನ್ನೇ ಅಪಹರಿಸಿಬಿಟ್ಟರೆ ಹೇಗೆ?'– ಎಂದು ಯೋಚಿಸಿ, ಪರವಾದಿಗಳು ಅವರ ಗ್ರಂಥಗಳನ್ನು ಅಪಹರಿಸಿದರು. ಪರವಾದಿಗಳ ಯೋಚನೆ ಪಂಚಾಂಗವನ್ನೇ ಕದ್ದುಬಿಟ್ಟರೆ ಸೂರ್ಯನೇ

ಉದಯಿಸುವುದಿಲ್ಲ! – ಎಂದು ಭಾವಿಸಿದಂತೆ, 'ತ್ಯಕ್ತವೇದ'ರೆನಿಸಿದ್ದ ಶ್ರೀಮದಾಚಾರ್ಯರು ಹೇಳಿದ್ದೇ ಗ್ರಂಥವಾಗುತ್ತಿತ್ತೇ ಹೊರತು ಗ್ರಂಥವನ್ನು ನೋಡಿ ಹೇಳಬೇಕಾದ ಅವಶ್ಯಕತೆ ಅವರಿಗಿರಲಿಲ್ಲ. **'ಋಷೀಣಾಂ ಪುನರಾದ್ಯಾನಾಂ ವಾಚಮರ್ಥೋಽನುಧಾವತಿ'**– ಎಂಬುದಾಗಿ ಉಲ್ಲೇಖಗೊಂಡ ಋಷಿಗಳ ಪಂಕ್ತಿಯಲ್ಲಿ ಮಿಗಿಲಾಗಿ ಪರಿಗಣಿಸಬೇಕಾದವರು ಅವರು.

## ಭಗವದ್ಗೀತೆಯೇ ಸಾಕ್ಷಿ

ಶ್ರೀಕೃಷ್ಣನಿಗೆ ಕೆಲವೊಮ್ಮೆ ಅರ್ಜುನನ ನಡೆನುಡಿಗಳು ಮೆಚ್ಚುಗೆಯಾಗಿರಲಿಲ್ಲ ಎಂಬುದಕ್ಕೆ ಭಗವದ್ಗೀತೆಯೇ ಸಾಕ್ಷಿ :

**ಅಶೋಚ್ಯಾನನ್ವಶೋಚಸ್ತ್ವಂ ಪ್ರಜ್ಞಾವಾದಾಂಶ್ಚ ಭಾಷಸೇ।**
**ಗತಾಸೂನಗತಾಸೂಂಶ್ಚ ನಾನು ಶೋಚಂತಿ ಪಂಡಿತಾಃ ॥**

ಇತರ ಅನೇಕರ ಬಗ್ಗೆಯೂ ಇಂತಹ ಮಾತನ್ನು ಭಗವಂತ ಆಡಿರುವನು. ಆದರೆ ಭೀಮನ ಬಗ್ಗೆ ಮಾತ್ರ ಎಂದೂ ಹೀಗೆ ಟೀಕಿಸಿಲ್ಲ, ಬದಲಾಗಿ ಅತ್ಯಂತ ವಿಶೇಷರೀತಿಯಲ್ಲಿ ಪ್ರಶಂಸಿಸಿರುವನು.

## ಭೀಮನ ಗದೆ ಅಲ್ಲ

ಜರಾಸಂಧ ತನ್ನ ಗದೆಯಿಂದ ಭೀಮನಿಗೆ ಹೊಡೆದರೆ ಆ ಗದೆಯೇ ಪುಡಿ ಪುಡಿ ಆದಂತೆ, ಭೀಮ ಗದೆಯಿಂದ ಜರಾಸಂಧನಿಗೆ ಹೊಡೆದರೆ ಆ ಗದೆಯೂ ಪುಡಿ ಪುಡಿಯಾಯಿತು – ಎಂದು ಮಹಾಭಾರತದಲ್ಲಿ ನಿರೂಪಣೆ ಇದೆ. ಹಾಗಾದರೆ ಭೀಮಸೇನನ ಗದೆ ಇಷ್ಟು ದುರ್ಬಲವಾದುದೇ?– ಎಂದು ಸಂಶಯ ಸಹಜ. ಆದರೆ ಅದು ಭೀಮಸೇನನ ಗದೆಯಲ್ಲ; ಭೀಮಸೇನ ಬರಿಗೈಯಲ್ಲಿ ಜರಾಸಂಧನಲ್ಲಿಗೆ ಹೋಗಿದ್ದು, ಅವನ ಜೊತೆಗೆ ಕಾದಾಡಲು ಜರಾಸಂಧ ತನ್ನ ಒಂದು ಗದೆಯನ್ನು ಭೀಮನಿಗೆ ಕೊಟ್ಟಿದ್ದ, ಆ ಗದೆಯಷ್ಟೇ ಪುಡಿಪುಡಿಯಾದ್ದದ್ದು – ಎಂಬ ಕಥಾಭಾಗವನ್ನು ನೆನಪಿಸಿಕೊಂಡರೆ ಸಂಶಯಕ್ಕೆ ಅವಕಾಶವಾಗದು.

## ದೇವರಿಗೆ ಮೀಸಲು

**'ಓಂ ನಮೋ ನಾರಾಯಣಾಯ ಜಲಂ ಸಮರ್ಪಯಾಮಿ'** ಎಂದು ದೇವರಿಗೆ ನೀರನ್ನು ಮೀಸಲಾಗಿಟ್ಟರೆ, ದೇವರು ನಮಗೆ ಬದುಕಿನಲ್ಲಿ ನೀರನ್ನು ಮೀಸಲಿರಿಸುವನು. **'ಓಂ ನಮೋ ನಾರಾಯಣಾಯ ಅನ್ನಂ ಸಮರ್ಪಯಾಮಿ'**– ಎಂದು ಅನ್ನವನ್ನು ಅವನಿಗೆ ಮೀಸಲಾಗಿ ನೀಡಿದರೆ, ನಮಗೆ ಅವನು ಅನ್ನವನ್ನು ಮೀಸಲಿರಿಸುವನು. ಅವನ ಪದಾರ್ಥಗಳನ್ನೇ 'ಕೆರೆಯ ನೀರನು ಕೆರೆಗೆ ಚೆಲ್ಲಿ ವರವ ಪಡೆದವರಂತೆ ಕಾಣಿರೋ' – ಎಂದಿರುವಂತೆ ಅವನಿಗೆ ಮೀಸಲಾಗಿಸುವುದು. ಇಷ್ಟರಿಂದಲೇ ತೃಪ್ತನಾಗಿ ಅನುಗ್ರಹೋನ್ಮುಖನಾಗುವಷ್ಟು ಕರುಣಾಳು; ಭಕ್ತವತ್ಸಲನಾಗಿರುವನು ದೇವರು.

## ಪ್ರತಿಭಟನೆಗೂ ಬೆಲೆ ಇದೆ

ದೇವರ ಹಾಗೂ ದೇವರ ಭಕ್ತರ ನಿಂದನೆ ನಡೆದರೆ, ಅದನ್ನು ಕೇಳುತ್ತಾ ಉಪೇಕ್ಷೆ ತಾಳುವವರ ಪಾಲಿಗೂ ಆ ನಿಂದನಾ ಪ್ರಯುಕ್ತ ಪಾಪದ ಸ್ವಲ್ಪ ಪಾಲು ಸಂದಾಯವಾಗುತ್ತದೆ. ಹೀಗಾಗಬಾರದೆಂದಿದ್ದರೆ ದೇವರ ನಿಂದನೆಯನ್ನು ಕೂಡಲೇ ಪ್ರತಿಭಟಿಸಬೇಕು. ಪ್ರತಿಭಟನೆ ತಾತ್ಕಾಲಿಕವಾಗಿ ಫಲಕಾರಿಯಾಗದಿದ್ದರೂ ಅದರಿಂದ ಪುಣ್ಯ ಬರುವುದು ಮಾತ್ರ ಅತ್ಯಂತ ನಿಶ್ಚಿತ. ವಿದುರ ಇಂತಹ ಪ್ರತಿಭಟನೆ ಮಾಡಿ ಶ್ರೀಕೃಷ್ಣಾನುಗ್ರಹಕ್ಕೆ ಪಾತ್ರನಾದ ಪುಣ್ಯಪುರುಷ.

## ನಗೆಯು ಬರುತಿದೆ ಎನಗೆ

ಶ್ರೀಹರಿಗುರುಗಳು ನಮ್ಮನ್ನು ಕಂಡು ನಗುವಂತೆ, ಅಪಹಾಸ ಮಾಡುವಂತೆ ನಾವು ನಡೆದುಕೊಳ್ಳಬಾರದು. 'ನಗೆಯು ಬರುತಿದೆ ಎನಗೆ... ಜಗದ ಮನುಜರೆಲ್ಲ ಹಗರಣವ ಮಾಡುವುದ ಕಂಡು' ಎಂದು ದಾಸರಾಯರು ನಕ್ಕಂತೆ ನಮ್ಮ ಆಚಾರಗಳನ್ನು ಕಂಡು ನಗುವಂತೆ ನಾವು ಅವುಗಳನ್ನು ವಿಕೃತವಾಗಿ ಆಚರಿಸಬಾರದು. ದುರ್ಯೋಧನನ ನಡತೆ ಭೀಮಸೇನ ಹಾಗೂ ಶ್ರೀಕೃಷ್ಣ ಇಬ್ಬರೂ ನಗುವಂತೆ ಮಾಡಿತ್ತು.

## ಯಥಾ ರಾಜಾ ತಥಾ ಪ್ರಜಾಃ

ಭೀಮದ್ರೌಪದಿಯರನ್ನು ವಿಶೇಷವಾಗಿ ದ್ವೇಷಿಸುತ್ತಿದ್ದ ದುರ್ಯೋಧನ ಕಲಿ ಆಗಿದ್ದು, ಅಂತಹ ಕಲಿಗೆ ಭೀಮ ಸಂಕೇತಿಸುವ ಜ್ಞಾನ ಮತ್ತು ದ್ರೌಪದಿ ಸಂಕೇತಿಸುವ ವಿದ್ಯೆ– ಇವುಗಳ ಬಗ್ಗೆ ವಿಶೇಷವಾದ ದ್ವೇಷ. ಆದುದರಿಂದಲೇ ಅಂತಹ ಕಲಿಯೇ ರಾಜನಾಗಿ ಉಳ್ಳ ಈ ಯುಗದ ಜನರೂ **'ಯಥಾ ರಾಜಾ ತಥಾ ಪ್ರಜಾಃ'** ಎಂದಿರುವಂತೆ ಜ್ಞಾನ ಮತ್ತು ವಿದ್ಯೆಗಳನ್ನು ವಿಶೇಷವಾಗಿ ದ್ವೇಷಿಸುವರು. ಬೇರೆ ಯಾವ ಕಾರ್ಯ ಮಾಡಲೂ ಸಿದ್ಧರಾಗುವರು; ಆದರೆ ಜ್ಞಾನಕಾರ್ಯವನ್ನು ಕಂಡರೆ ಆಗದು. ಕೆಲವೊಂದು ಸಂದರ್ಭಗಳಲ್ಲಿ ಇಂತಹ ಜನರ ಜ್ಞಾನಕಾರ್ಯವೂ ಹರಟೆಯಾಗಿ ರೂಪುಗೊಳ್ಳುವ ಅಪಾಯ ಇದೆ.

## ಮಹಾಭಾರತನಿರ್ಣಯಂ ಶಿಕ್ಷಯೇತ್ ಸುಧೀ

**'ಸಮಸ್ತಶಾಸ್ತ್ರಾರ್ಥವಿನಿರ್ಣಯೋಽಯಂ ವಿಶೇಷತೋ ಭಾರತವರ್ತ್ಮಚಾರೀ...'** ಎಂಬುದಾಗಿ ಏನೇನು ಶಾಸ್ತ್ರದ ಪ್ರಮೇಯ ಬೇಕೋ ಅದೆಲ್ಲ ಮಹಾಭಾರತತಾತ್ಪರ್ಯನಿರ್ಣಯದಲ್ಲಿದೆ ಎಂದು ಶ್ರೀಮದಾಚಾರ್ಯರು ತಿಳಿಸಿರುವರು. ಆದರೆ ನಾವು ಅದರ ಅಧ್ಯಯನವನ್ನು ನಡೆಸುವುದೇ ಇಲ್ಲ. ಅನೇಕರು 'ಕಾವ್ಯವ್ಯುತ್ಪತ್ತಿ'ಯ ಉದ್ದೇಶಕ್ಕಾಗಿ ಸಹ ರಘುವಂಶಾದಿಗಳ ಪಾಠವನ್ನು ನಡೆಸುವರೇ ಹೊರತು ಮಹಾಭಾರತತಾತ್ಪರ್ಯನಿರ್ಣಯದ ಪಾಠವನ್ನಲ್ಲ. ಶ್ರೀನಾರಾಯಣಪಂಡಿತಾಚಾರ್ಯರು ತಮ್ಮ **'ಯೋಗದೀಪಿಕಾ'**ದಲ್ಲಿ **'ಮಹಾಭಾರತತಾತ್ಪರ್ಯನಿರ್ಣಯಂ ಆದೌ ಶಿಕ್ಷಯೇತ್ ಸುಧೀಃ'** ಎಂಬುದಾಗಿ ಪ್ರಾರಂಭದಲ್ಲಿಯೇ ಮಹಾಭಾರತತಾತ್ಪರ್ಯನಿರ್ಣಯದ ಶಿಕ್ಷಣವನ್ನು ಮಕ್ಕಳಿಗೆ ನೀಡಬೇಕೆಂದು ಎಚ್ಚರಿಸಿರುವರು. ಆದರೆ ಇಂದು ಮಕ್ಕಳಿಗೆ ಹೇಳುವುದಿರಲಿ ತಾವೂ ಸಹ ಇದನ್ನು ಓದದೆ ಜೀವನ ವ್ಯರ್ಥಮಾಡಿಕೊಳ್ಳುವ ಜನಗಳ ಸಂಖ್ಯೆಯೇ ಹೆಚ್ಚು.

## ನಿದ್ರೆಗೆ ಅವಕಾಶ ಕೊಟ್ಟರೆ ವರ್ಷವಿಡೀ ಹಾಳು

ಮಗುವಿಗೆ ಶಾಲೆಯಲ್ಲಿ ಪರೀಕ್ಷೆ ಇದೆ. ಬೆಳಗ್ಗೆ ಎದ್ದು ಓದಬೇಕು. ಆದರೆ ಮಲಗಿಕೊಂಡ ಮಗುವಿಗೆ ನಿದ್ದೆಯನ್ನು ಯಾಕೆ ಕೆಡಿಸಬೇಕು? ಹಾಯಾಗಿ ಮಲಗಲಿ ಎಂದು ಮಲಗಲು ಅವಕಾಶ ಕೊಟ್ಟರೆ ಮಗು ಪರೀಕ್ಷೆಯಲ್ಲಿ ಅನುತ್ತೀರ್ಣನಾಗಿ ಅವನ ಇಡೀ ವರ್ಷವೆಲ್ಲ ಹಾಳಾಗುವುದು. ಹಾಗಾಗಬಾರದೆಂದಿದ್ದರೆ 'ಮಗು ಮಲಗಲಿ' ಎಂಬ ಮೋಹಕ್ಕೊಳಗಾಗದೆ ಎಬ್ಬಿಸಬೇಕು. ಅಂತೆಯೇ ಜನ್ಮಾಂತರದಲ್ಲಿ ಸುಖ ದೊರಕುವಂತಾಗಬೇಕೆಂಬ ಉದ್ದೇಶದಿಂದ ಮಕ್ಕಳಿಂದಲೂ ಉಪವಾಸಾದಿ ಸತ್ಕರ್ಮಗಳನ್ನು ನಿರ್ದಾಕ್ಷಿಣ್ಯವಾಗಿ ಮಾಡಿಸಬೇಕೇ ಹೊರತು 'ಮಕ್ಕಳು ಊಟ ಮಾಡಲಿ' 'ಸ್ವಚ್ಛಂದವಾಗಿರಲಿ' ಎಂದೆಲ್ಲ ಕುರುಡು ವ್ಯಾಮೋಹವನ್ನು ಬೆಳೆಸಿಕೊಳ್ಳಬಾರದು.

## ವಿದ್ಯೆಯನ್ನು ಮಾತ್ರ ಕೊಂಡೊಯ್ಯುವುದು

ವಿದ್ಯಾರ್ಥಿ ವಿದ್ಯಾಭ್ಯಾಸ ಮುಗಿಸಿ ವಿದ್ಯಾಸಂಸ್ಥೆಯಿಂದ ಮನೆಗೆ ಬರುವಾಗ, ಅವನು ಅಲ್ಲಿಂದ ಬೇರೆ ಯಾವುದನ್ನೂ ತರುವುದಿಲ್ಲ; ವಿದ್ಯೆಯನ್ನು ಮಾತ್ರ ಗಳಿಸಿಕೊಂಡು ಬರುವನು. ಅದರಂತೆ ವಿದ್ಯಾರ್ಥಿಯಾಗಿ ಮನುಷ್ಯಜನ್ಮ ತಾಳುವ ಜೀವನೂ, ಇಲ್ಲಿಂದ ಹೊರಡುವಾಗ ತನ್ನ ಜೊತೆಗೆ ವಿದ್ಯೆಯನ್ನು, ಜ್ಞಾನವನ್ನು ಮಾತ್ರ ಜೊತಗೆ ಒಯ್ಯುವನು.

## ಕಸಕ್ಕಿಂತ ಕಡೆ

ರಾತ್ರಿಕಾಲ ಮನೆಯ ಕಸವನ್ನು ಹೊರಹಾಕಿದರೆ ಲಕ್ಷ್ಮೀದೇವಿಯ ಸನ್ನಿಧಾನ ಕಡಿಮೆಯಾಗುವುದೆಂದು ಕಸವನ್ನು ಹಾಗೆಯೇ ಬದಿಗೆ ಸರಿಸಿ ಇಡುವ ಪದ್ಧತಿ. ಆದರೆ ಹೆಣವನ್ನು ಹಾಗಲ್ಲ; ರಾತ್ರಿ ಕಾಲವಾದರೂ ಆ ಕ್ಷಣದಲ್ಲಿಯೇ ಹೊರಗೆ ಸಾಗಿಸಲಾಗುವುದು. ಈ ಅಭಿಪ್ರಾಯದಲ್ಲಿಯೇ ಹರಿದಾಸರು ದೇಹವನ್ನು 'ಕಸಕ್ಕಿಂತ ಕಡೆಯಾಯಿತು' ಎಂದು ನಿಂದಿಸುವುದಿದೆ.

## ಯುವಸಿಂಹಖೇಲಗತಿಂ

ಭೀಮಸೇನ ಅರಣ್ಯಕ್ಕೆ ತೆರಳುವಾಗಲೂ ಯುವಸಿಂಹದಂತೆ ಗಂಭೀರವಾಗಿ ಹೆಜ್ಜೆಗಳನ್ನಿಡುತ್ತಿದ್ದನೆಂದು '**ಯುವಸಿಂಹಖೇಲಗತಿಂ**' ಎಂಬ ವಿಶೇಷಣದಿಂದ ತಿಳಿಸಲಾಗಿದೆ. ಬರೇ ಗಾಂಭೀರ್ಯದ ವಿಷಯದಲ್ಲಷ್ಟೇ ಅಲ್ಲ; ಧೈರ್ಯದ ವಿಷಯದಲ್ಲೂ ಈ ವಿಶೇಷಣ ಔಚಿತ್ಯಪೂರ್ಣ. ಯುವಸಿಂಹ ಹೇಗೆ ಯಾವುದೇ ಇತರ ಪಶುಗಳಿಗೆ ಭಯಪಡುವುದಿಲ್ಲವೋ ಅಂತೆಯೇ ಭೀಮಸೇನನೂ ಯಾವ ಶತ್ರುವಿಗೂ ಭಯಪಡದೆ ಧೈರ್ಯದಿಂದ ಇದ್ದನು. ತಾನೇನೂ ತಪ್ಪು ಮಾಡಿಲ್ಲ ಎಂಬುದಾಗಿ ಚೆನ್ನಾಗಿ ಅರಿತಿದ್ದ ಅವನದ್ದು ಪ್ರಾಮಾಣಿಕ ಧೈರ್ಯ.

## ನೋ, ಥ್ಯಾಂಕ್ಸ್

ಏಕಾದಶೀ ದಿನದಂದು ಯಾರಾದರೂ ಕಾಫಿ ಕೊಡಲು ಬಂದಾಗ 'ನೋ ಥ್ಯಾಂಕ್ಸ್' ಎನ್ನಬೇಕೇ ಹೊರತು ಅವರಿಗೆ ಬೇಸರವಾಗುವುದೆಂದು ಕಾಫಿಯನ್ನು ಕುಡಿದುಬಿಡುವುದಲ್ಲ.

ಅಂತೆಯೇ ದುರ್ಯೋಧನ ಕರ್ಣನಿಗೆ ಅಂಗರಾಜ್ಯವನ್ನು ದಾನವಾಗಿ ನೀಡಿದಾಗ, ಕ್ಷತ್ರಿಯ ಧರ್ಮಕ್ಕೆ ಒಗ್ಗದ ಆ ದಾನವನ್ನು ಅವನು 'ನೋ ಥಾಂಕ್ಸ್' ಎಂದು ನಿರಾಕರಿಸಬೇಕಿತ್ತು.

## ಸೂರ್ಯನನ್ನು ಬದಿಗಿರಿಸಿದಂತೆ

ಮಹಾಭಾರತದಲ್ಲಿ ಭೀಮಸೇನನ ಪಾತ್ರವನ್ನು ಗೌಣವಾಗಿಸಿದರೆ, ಆಕಾಶದಲ್ಲಿ ಸೂರ್ಯನನ್ನು ಬದಿಗಿರಿಸಿ ಯಾವುದೋ ನಕ್ಷತ್ರಕ್ಕೆ ಮಹತ್ತ್ವವನ್ನು ಕೊಟ್ಟಂತಾಗುವುದು. ಸೂರ್ಯನಂತೆ ಭೀಮಸೇನ ಮಹಾಭಾರತದ 'ದಿನಮಣಿ'

## ಯುದ್ಧ ಮಾಡಿಸಿದವನು

ಭೀಮಸೇನ ಮಹಾಭಾರತ ಯುದ್ಧದಲ್ಲಿ ತಾನು ಯುದ್ಧ ಮಾಡಿದ್ದಲ್ಲದೆ, ಯುಧಿಷ್ಠಿರ ಯುದ್ಧ ಮಾಡುವಂತೆ ಅವನನ್ನು 'ವೀರಕ್ಷತ್ರಿಯ'ನನ್ನಾಗಿ ಸಿದ್ಧಪಡಿಸಿದವನೂ ಅವನೇ; ಗಂಗೆ ತಾನು ಪವಿತ್ರವಾಗಿರುವುದಲ್ಲದೆ, ತನ್ನ ಸಂಪರ್ಕಕ್ಕೊಳಗಾದವರನ್ನೂ ಪವಿತ್ರಗೊಳಿಸುವಂತೆ.

## ವಿದ್ಯೋಪಜೀವನದ ನಿಷೇಧ

ಕಾಳಿದಾಸನ 'ಮಾಲವಿಕಾಗ್ನಿಮಿತ್ರ' ಎಂಬ ನಾಟಕ ಇದೆ. ಅದರಲ್ಲೂ ಅವನು ವಿದ್ಯೋಪಜೀವನ ಅನುಚಿತ ಎಂದು ಸಾರಿದ್ದಾನೆ – **'ಯಸ್ಯಾಗಮಃ ಕೇವಲಂ ಜೀವಿಕೈವ ತಂ ಜ್ಞಾನಪಣ್ಯಂ ವಣಿಜಂ ವದಂತಿ'** – ಎಂಬುದಾಗಿ.

## ಇಂದಿಗೂ ಇರುವವರು

ಮಧ್ವಾಚಾರ್ಯರು ಇದ್ದು ಹೋದ ಗುರುಗಳಲ್ಲ, ಈಗಲೂ ಇರುವ ಗುರುಗಳು. ಶ್ರೀವಾದಿರಾಜಸ್ವಾಮಿಗಳ ಮಾತು ಹೀಗಿದೆ:

**ಅದ್ಯಾಪಿ ಬದರೀಶೈಲೇ ಬದರೀಷಂಡಮಂಡಿತೇ ।**
**ಮಧ್ಯೇ ಮುನೀನಾಮಧ್ಯಾಸ್ತೇ ವಿದ್ವಾನ್ ವ್ಯಾಸಸ್ಯ ಸನ್ನಿಧೌ॥**

–ಉತ್ತರಬದರಿಯಲ್ಲಿ ಶ್ರೀವೇದವ್ಯಾಸರ ಸನ್ನಿಧಿಯಲ್ಲಿ ಇನ್ನೂ ಶ್ರೀಮಧ್ವಾಚಾರ್ಯರು ಇರುವರು. ದೇವತೆಗಳ ನೂರುವರ್ಷ ಕಾಲ ಅಂದರೆ ಮನುಷ್ಯನ ಮೂವತ್ತಾರುಸಾವಿರ ವರ್ಷಗಳು ಕಳೆದ ಅನಂತರವೇ ಅವರು ಮೂಲರೂಪಕ್ಕೆ ತೆರಳುವರು.

## 'ರೈಸ್' ನಿಂದ ಉಲ್ಲೇಖ

ಶ್ರೀಮಧ್ವಾಚಾರ್ಯರು ಒಂದು ಕೈಯಿಂದ ಬಂಡೆಯನ್ನು ಎತ್ತಿ ಕಳಸದ ತುಂಗಭದ್ರಾನದಿಯ ಪಕ್ಕದಲ್ಲಿ ಇಟ್ಟಿರುವುದನ್ನು ಪತ್ತೆ ಹಚ್ಚಿದ ವ್ಯಕ್ತಿ ಪರದೇಶದ 'ರೈಸ್' ಎನ್ನುವವನು. ವೈಜ್ಞಾನಿಕ ವಿಧಾನದಿಂದ ಆ ಬಂಡೆ ಐವತ್ತುಟನ್‌ಗಿಂತಲೂ ಭಾರ ಇದೆ ಎಂದೂ, ಅದರ ಮೇಲಿರುವ **'ಶ್ರೀ ಮಧ್ವಾಚಾರ್ಯೈರೇಕಹಸ್ತೇನಾನೀಯ ಸ್ಥಾಪಿತಾ ಶಿಲಾ'** ದಾಖಲೆ ಸತ್ಯವಾದುದೆಂದೂ ಅವನು ತಿಳಿಸಿರುವನು. ಆದರೆ ನಮ್ಮ ಜನ ಅಂತಹ

ಸಂಶೋಧನೆಯ ಮಹತ್ತ್ವವನ್ನು ಅರ್ಥ ಮಾಡಿಕೊಂಡು ಅಲ್ಲಿಗೆ ಹೋಗಿ ಅದರ ಸಂದರ್ಶನವನ್ನಾದರೂ ಮಾಡೋಣ ಎಂಬಷ್ಟು ಜಿಜ್ಞಾಸೆಯನ್ನೂ ಬೆಳೆಸಿಕೊಳ್ಳದಷ್ಟು ಹೀನಸ್ಥಿತಿಯಲ್ಲಿರುವರು.

### ಹೇಗೆ ವಿಶ್ವಾಸ ?

ಊಟದಲ್ಲಿ ಸಾರು ಬಡಿಸುತ್ತಿರುವಾಗ ಒಂದು ಸೌಟು ಸಾರು ಹಾಕಿ ಮುಂದುವರೆಯುತ್ತಾ ಮತ್ತೊಮ್ಮೆ ಬರುವಾಗ ಹಾಕುವುದೆಂದರೆ ಕೂಡಲೇ ಅನ್ನದಕಟ್ಟೆಯನ್ನು ದೊಡ್ಡದು ಮಾಡುತ್ತ ಈಗಲೇ ಹಾಕಿ ಬಿಡಿ – ಎನ್ನುವರು. ಎಂದರೆ ಇನ್ನೊಮ್ಮೆ ಸಾರು ಬರುವುದೋ ಇಲ್ಲವೋ ಎಂಬ ನಂಬಿಕೆ ಅವರಿಗಿಲ್ಲ ಎಂದರ್ಥ. ಆದರೆ ಶಾಸ್ತ್ರಾಧ್ಯಯನ ಮಾಡಿ, ಜ್ಞಾನಸಂಪಾದನೆ ಮಾಡಿ ಎಂದರೆ 'ಮುಂದಿನ ಜನ್ಮದಲ್ಲಿ ಆಗಲಿ' ಎನ್ನುವರು. ಎಂದರೆ ಮುಂದಿನ ಜನ್ಮದಲ್ಲಿ ಮಾನವನಾಗಿಯೇ ಹುಟ್ಟುವೆನು, ಬುದ್ಧಿವಂತನೇ ಆಗುವೆನು, ಅನುಕೂಲಕರ ಪರಿಸರವೇ ಲಭಿಸುವುದು ಎಂದು ನಿಶ್ಚಿತವೆಂಬಂತೆ ವರ್ತಿಸುವರು. ಎಂತಹ ಆಶ್ಚರ್ಯ!

### ಎರಡೂ ಪಾತ್ರಗಳ ಚಿಂತನೆ

ಭೀಮಸೇನನ ಪಾತ್ರದ ಚಿಂತನೆ ನಡೆಸುವಾಗ ಜೊತೆಯಾಗಿಯೇ ಶ್ರೀಮಧ್ವಾಚಾರ್ಯರ ಪಾತ್ರದ ಚಿಂತನೆಯೂ ನಡೆಯುವುದು. ಮಹಾಭಾರತದಲ್ಲಿ ಭೀಮಸೇನ ಹೇಗೆ ನಡೆದುಕೊಂಡನೆಂಬುದನ್ನು ಪರಿಶೀಲಿಸಿದರೆ ಶ್ರೀಮಧ್ವಾಚಾರ್ಯರು ಆ ಪಾತ್ರವನ್ನು ಹೇಗೆ ಚಿತ್ರಿಸಿರುವರೆಂಬುದನ್ನು ನೋಡುವ ಮೂಲಕ ಅವರ ಪಾತ್ರದ ಚಿಂತನೆಯೂ ನಡೆಯುವುದು.

### ಭಾಗವತದ ಪ್ರವಚನ

ಭೀಮಸೇನ ಮಹಾಭಾಗವತ. ಅವನ ಚರಿತ್ರೆಯನ್ನು ಪರಿಶೀಲಿಸಿದೆವೆಂದರೆ ಭಾಗವತದ ಪರಿಶೀಲನೆ ನಡೆಸಿದಂತೆಯೇ. ಆದ್ದರಿಂದ ಭಾಗವತದ ಪ್ರವಚನವನ್ನೂ ನಡೆಸಿದಂತೆ ಆಗಿದೆ. ಪ್ರೋಷ್ಠಪದಿಯ ಸಂದರ್ಭದಲ್ಲಿ ಭಾಗವತದ ಪ್ರವಚನದ ಬದಲು ಭಾಗವತಶಿರೋಮಣಿ ಭೀಮಸೇನನ ಪಾತ್ರ ವಿಶ್ಲೇಷಣೆಯ ಪ್ರವಚನ ಅದಕ್ಕೆಂದೇ ಔಚಿತ್ಯಪೂರ್ಣವಾಗಿದೆ.

॥ ಶ್ರೀಕೃಷ್ಣಾರ್ಪಣಮಸ್ತು ॥



